ಭರ್ತಿಮಾಡಿದ ಟೆಂಡರುಗಳನ್ನು ಗುತ್ತಿಗೆದಾರರು ಕಾರ್ಯನಿರ್ವಾಹಕ ಅಭಿಯಂತರವರ ಕಛೇರಿ, ಲೋಕೋಪಯೋಗಿ ಇಲಾಖೆ, ರಾಯಚೂರು ವಿಭಾಗ, ರಾಯಚೂರು, ಇವರ ಕಛೇರಿಯಲ್ಲಿ ನಿಗದಿತ ದಿನಾಂಕ ಮತ್ತು ವೇಳೆಯಲ್ಲಿ ಸಲ್ಲಿಸತಕ್ಕದ್ದು ಈ ಕೆಳಗೆ ನಮೂದಿಸಿದ ದಿನಾಂಕದಂದು ಈ ಕೆಳಗೆ ಸಹಿ ಮಾಡಿದ ಅಧಿಕಾರಿಗಳಿಂದ ತೆರೆಯಲಾಗುವುದು. ಅಕಾಸ್ಮಾತ್ ಈ ಕೆಳಗೆ ನಮೂದಿಸಿದ ದಿನಾಂಕವು ಸಾರ್ವತ್ರಿಕ ರಜಾ ದಿನವೆಂದು ಘೋಷಿಸಿದಲ್ಲಿ ಮುಂದಿನ ಕಛೇರಿ ಕೆಲಸದ ದಿನಾಂಕವನ್ನು ಪರಿಗಣಿಸಬೇಕು.

ಅರ್ಜಿಸಲ್ಲಿಸುವ ಗುತ್ತಿಗೆದಾರರು ತಮ್ಮ ಅರ್ಜಿಯೊಡನೆ ಮೂಲ ನೊಂದಣಿ ಪ್ರಮಾಣ ಪತ್ರ ಪರಿಶೀಲನೆಗಾಗಿ ತರಬೇಕು. ಒಂದು ವೇಳೆ ನೊಂದಾಣಿ ಪ್ರಮಾಣ ಪತ್ರ ತರದೆ ಇದ್ದ ಪಕ್ಷದಲ್ಲಿ ಅರ್ಜಿಯನ್ನು ಸ್ವೀಕರಿಸುವುದಿಲ್ಲ. ಟೆಂಡರ್ ದಾಖಲೆಯ ಶುಲ್ಕವನ್ನು (ಹಿಂತಿರುಗಿಸಲಾಗುವುದಿಲ್ಲ) ಕಾರ್ಯನಿರ್ವಾಹಕ ಇಂಜಿನೀಯರವರ ಹೆಸರಿನ ಮೇಲೆ ಡಿಮ್ಯಾಂಡ್ ಡ್ರಾಫ್ಟ್/ ನಗದು ರೂಪದಲ್ಲಿ ನಿಗದಿಪಡಿಸಿದ ದಿನಾಂಕದಂದು ಅಥವಾ ಪೂರ್ವದಲ್ಲಿಯೇ ಸಲ್ಲಿಸಬೇಕು.

| ಕ್ರ. ಸಂ. | ಕಾಮಗಾರಿಯ ಹೆಸರು | ಮಂಜೂರಾದ ಅಂದಾಜು ಮೊತ್ತ (ಲಕ್ಷ ರೂ.ಗಳಲ್ಲಿ) | ಟೆಂಡರ್‌ಗೆ ಇಟ್ಟ ಹಣ (ಲಕ್ಷ ರೂ.ಗಳಲ್ಲಿ) | ಮುಂಗಡ ಠೇವಣಿ ಹಣ (ರೂ.ಗಳಲ್ಲಿ) | ಟೆಂಡರ್ ಫಾರಂನ ಬೆಲೆ ತೆರಿಗೆ ಸಹಿತ (ರೂ.ಗಳಲ್ಲಿ) | ಕಾಮಗಾರಿಯನ್ನು ಮುಗಿಸುವ ಕಾಲಾವಧಿ (ಮಳೆಗಾಲ ಸೇರಿ) | ಕರೆಯ ಸಂಖ್ಯೆ ಟೆಂಡರಿನ ವಿಧಾನ | ಗುತ್ತೇದಾರರ ದರ್ಜೆ |
|---|---|---|---|---|---|---|---|---|
| 1 | 2 | 3 | 4 | 5 | 6 | 7 | 8 | 9 |
| | **3054 ರಸ್ತೆ ಮತ್ತು ಸೇತುವೆ (ಯೋಜನೆ)** | | | | | | | |
| 1. | **ರಾಯಚೂರು ತಾಲ್ಲೂಕು ಪ್ಯಾಕೇಜ್-1** ಗಿಲ್ಲೇಸುಗೂರು-ಮಟಮಾರಿ ರಸ್ತೆ ಕಿ.ಮೀ.4.000 ರಿಂದ 4.270, 4.275 ರಿಂದ 4.550, 4.560 ರಿಂದ 4.850, 4.900 ರಿಂದ 5.170, 5.175 ರಿಂದ 5.450, 5.470 ರಿಂದ 5.750, 5.760 ರಿಂದ 6.100, 6.150 ರಿಂದ 6.420 ಮತ್ತು 6.430 ರಿಂದ 6.700ರ ವರೆಗೆ ಅಭಿವೃದ್ದಿ ಹಾಗೂ ಜಲ್ಲಿಕರಣ. | 18.00 | 18.00 | 27,000-00 | 2,200-00 | 3 ತಿಂಗಳು | ಮೊದಲನೇ ಕರೆ ಮತ್ತು ಐಟಂವಾರು | ಎರಡನೇ ಮತ್ತು ಮೇಲ್ಪಟ್ಟ ದರ್ಜೆ ಲೋ.ಇ. ಗುತ್ತಿಗೆದಾರರು. |
| 2. | **ಪ್ಯಾಕೇಜ್-2** ಯರಗೆರಾ- ಅಲಂಪುರ ರಸ್ತೆ ಕಿ.ಮೀ. 1.00 ರಿಂದ 1.50, 1.55 ರಿಂದ 2.00, 2.05 ರಿಂದ 2.50, 2.55 ರಿಂದ 3.00, 3.05 ರಿಂದ 3.55, 3.60 ರಿಂದ 4.10, 4.15 ರಿಂದ 4.50 ಮತ್ತು 4.55 ರಿಂದ 5.00ರ ವರೆಗೆ ಅಗಲೀಕರಣ ಹಾಗೂ ಡಾಂಬರೀಕರಣ. | 16.00 | 16.00 | 24,000-00 | 2,200-00 | 3 ತಿಂಗಳು | ಮೊದಲನೇ ಕರೆ ಮತ್ತು ಐಟಂವಾರು | ಎರಡನೇ ಮತ್ತು ಮೇಲ್ಪಟ್ಟ ದರ್ಜೆ ಲೋ.ಇ. ಗುತ್ತಿಗೆದಾರರು. |
| 3. | **ಪ್ಯಾಕೇಜ್-3** ರಾಯಚೂರು-ಅರಷಣಗಿ ರಸ್ತೆಯ ಸುಧಾರಣೆ ಕಿ.ಮೀ.17.00 ರಿಂದ 17.20, 17.20 ರಿಂದ 17.45, 17.45 ರಿಂದ 17.75, 17.75 ರಿಂದ 17.95, 18.00 ರಿಂದ 18.20, 18.25 ರಿಂದ 18.45, 18.50 ರಿಂದ 18.70 ಮತ್ತು 18.75 ರಿಂದ 18.95. | 16.00 | 16.00 | 24,000-00 | 2,200-00 | 3 ತಿಂಗಳು | ಮೊದಲನೇ ಕರೆ ಮತ್ತು ಐಟಂವಾರು | ಎರಡನೇ ಮತ್ತು ಮೇಲ್ಪಟ್ಟ ದರ್ಜೆ ಲೋ.ಇ. ಗುತ್ತಿಗೆದಾರರು. |

**ನೋಟ್: ಗುತ್ತೇದಾರರು ಕಾಮಗಾರಿಗೆ ದ್ವಿಪ್ರತಿ ಶೆಡ್ಯೂಲ್-ಬಿ ಜೊತೆಗೆ ನಮೂದಿಸಿರುವ ವಿವರಗಳು ಒಂದೇ ಲಕೋಟೆಯಲ್ಲಿ ಸಲ್ಲಿಸತಕ್ಕದ್ದು.**

1. ದೃಢೀಕೃತ ಕರ್ನಾಟಕ ಸರ್ಕಾರದ ಎರಡನೇ ಮತ್ತು ಮೂರನೇ ಮೇಲ್ಪಟ್ಟ ದರ್ಜೆಯ ಗುತ್ತಿಗೆದಾರರ ನೊಂದಣಿಪತ್ರ 2005-2010ನೇ ಬ್ಲಾಕ್ ಅವಧಿಗೆ ನವೀಕೃತಗೊಳಿಸಿರತಕ್ಕದ್ದು.
2. ದೃಢೀಕೃತ ಗುತ್ತಿಗೆದಾರರ ಅನುಭವ ಪ್ರಮಾಣ ಪತ್ರ.
3. ಮುಂಗಡ ಠೇವಣಿ ಹಣದ ಮೊತ್ತ.
4. ಪ್ರತ್ಯೇಕ ಲಕೋಟೆ ಮೇಲೆ ಕಾಮಗಾರಿಯ ಹೆಸರು ಗುತ್ತಿಗೆದಾರರ ಹೆಸರು ಹಾಗೂ ಅಂಚೆ ವಿಳಾಸ ನಮೂದಿಸತಕ್ಕದ್ದು.

**ಷರತ್ತುಗಳು:**

1. ಟೆಂಡರ್ ಸಲ್ಲಿಸಲು ಇಚ್ಛಿಸುವ ಅರ್ಜಿದಾರರು ಅನುಭವ ಪ್ರಮಾಣ ಪತ್ರವನ್ನು ತಪ್ಪದೇ ಸಲ್ಲಿಸಬೇಕು. ಸದರಿ ಪ್ರಮಾಣ ಪತ್ರ ಟೆಂಡರಿಗೆ ಇಟ್ಟ ಹಣ ಮೊತ್ತದ ಶೇಕಡಾ ಮೂವತ್ತು (30)ರಷ್ಟು ಮೊತ್ತಕ್ಕೆ ಕಡಿಮೆ ಇಲ್ಲದಂತೆ ಇಂತಹ ರಸ್ತೆ ಕಾಮಗಾರಿಯನ್ನು ಕಳೆದ ಐದು ವರ್ಷದ ಅಂದರೆ 2001-2006ರ ಅವಧಿಯಲ್ಲಿ ಯಾವುದಾದರೂ ಒಂದು ಆರ್ಥಿಕ ವರ್ಷದಲ್ಲಿ ನಿರ್ವಹಿಸಿರತಕ್ಕದ್ದು (ಹಿಂದಿನ ವರ್ಷಗಳಲ್ಲಿ ನಿರ್ವಹಿಸಿದ ಕಾಮಗಾರಿಗಳಿಗೆ ಪ್ರತಿ ವರ್ಷ ಶೇಕಡಾ ಹತ್ತು (10) ರಂತೆ ಕಾಂಪೌಂಡಿಂಗ್ ಹೆಚ್ಚುವರಿ ಪರಿಗಣಿಸಲಾಗುವುದು) ಪರ್ಯಾಯವಾಗಿ ಗುತ್ತೇದಾರರು

ಪ್ರಸ್ತುತ ಸಾಲಿನಲ್ಲಿ ಕೈಗೊಂಡ ಚಾಲ್ತಿಯಲ್ಲಿರುವ ಕಾಮಗಾರಿಯ ಶೇಕಡಾ 30ರಷ್ಟು ಮೊತ್ತಕ್ಕೆ ಕಡಿಮೆ ಇಲ್ಲದಂತೆ ಇಂತಹ ರಸ್ತೆ ಕಾಮಗಾರಿಯನ್ನು ನಿರ್ವಹಿಸಿದ ಬಗ್ಗೆ ಅನುಭವ ಪ್ರಮಾಣ ಪತ್ರವನ್ನು ಕಾರ್ಯನಿರ್ವಾಹಕ ಇಂಜಿನೀಯರ ಅಧಿಕಾರಿಯಿಂದ ಪಡೆದು ಸಹ ಸಲ್ಲಿಸಬಹುದು.

2. ಟೆಂಡರ್ ಜೊತೆಗೆ ಲಗತ್ತಿಸಿದ ಎಲ್ಲಾ ಪ್ರಮಾಣ ಪತ್ರಗಳನ್ನು ಪತ್ರಾಂಕಿತ ಅಧಿಕಾರಿ/ ನೋಟರಿಯವರಿಂದ ನೋಟರಿ ಮುದ್ರೆಯೊಂದಿಗೆ ದೃಢೀಕರಿಸಿ ಸಲ್ಲಿಸತಕ್ಕದ್ದು, ಮೂಲಪ್ರಮಾಣ ಪತ್ರಗಳನ್ನು ಬೇಕೆಂದಾಗ ಪರಿಶೀಲನೆಗೆ ಒದಗಿಸತಕ್ಕದ್ದು.
3. ಮುಂಗಡ ಠೇವಣಿ ಹಣ ಮೊತ್ತವನ್ನು ಕಾರ್ಯನಿರ್ವಾಹಕ ಇಂಜಿನೀಯರರ ಹೆಸರಿನಲ್ಲಿ ತೆಗೆಸಿದ ರಾಷ್ಟ್ರೀಕೃತ/ ಶೆಡ್ಯೂಲ್ ಬ್ಯಾಂಕಿನಿಂದ ಮಾಡಿದ ಬ್ಯಾಂಕ್ ಗ್ಯಾರಂಟಿ, ಕಾಲ್ ಡಿಪಾಜಿಟ್, ಡಿ.ಡಿ., ಪೇ ಆರ್ಡರ್, ಬ್ಯಾಂಕ್ರ್ಸ್ ಚೆಕ್, ಡಿ.ಡಿ. ಅಂಚೆ ಕಛೇರಿಯಿಂದ ಪ್ಲೆಡ್ಜ್ ಮಾಡಿದ ರಾಷ್ಟ್ರೀಯ ಉಳಿತಾಯ ಪತ್ರಗಳ, ರೂಪದಲ್ಲಿ ಮಾತ್ರ ಸಲ್ಲಿಸತಕ್ಕದ್ದು.
4. ಕಾಮಗಾರಿಗೆ ಬೇಕಾಗಿರುವ ಐ.ಆರ್.ಸಿ. ಮತ್ತು ಐ.ಎಸ್.ಐ. ಮಾರ್ಕ್ ಹೊಂದಿರುವ ಎಲ್ಲಾ ಸಾಮಗ್ರಿಗಳನ್ನು (ಅಂದರೆ ಡಾಂಬರು, ಉಕ್ಕು, ಸಿಮೆಂಟ್, ಹ್ಯೂಮ್‌ಪೈಪ್ ಇತ್ಯಾದಿ) ಗುತ್ತಿಗೆದಾರರು ತಾವೇ ಪೂರೈಸಿಕೊಳ್ಳಬೇಕು. ಇಲಾಖೆಯಿಂದ ಯಾವುದೇ ಸಾಮಗ್ರಿಗಳನ್ನು ಪೂರೈಸಲಾಗುವುದಿಲ್ಲ ಹಾಗೂ ಗುಣನಿಯಂತ್ರಣ ಪರೀಕ್ಷೆಯ ವೆಚ್ಚವನ್ನು ಗುತ್ತಿಗೆದಾರರು ತುಂಬಬೇಕಾಗುತ್ತದೆ.
5. ಯಾವುದೇ ಟೆಂಡರನ್ನು/ ಎಲ್ಲಾ ಟೆಂಡರ್‌ಗಳನ್ನು ಯಾವುದೇ ಕಾರಣವನ್ನು ನೀಡದೇ ತಿರಸ್ಕರಿಸುವ ಹಕ್ಕನ್ನು ಸಕ್ಷಮ ಅಧಿಕಾರಿಗಳು ಹೊಂದಿರುತ್ತಾರೆ.
6. ಹೆಚ್ಚಿನ ಮಾಹಿತಿಗಳು ಬೇಕಾದಲ್ಲಿ ಕಾರ್ಯನಿರ್ವಾಹಕ ಇಂಜಿನೀಯರರು, ಲೋಕೋಪಯೋಗಿ ಇಲಾಖೆ ರಾಯಚೂರು ವಿಭಾಗ, ರಾಯಚೂರು, ಇವರ ಕಛೇರಿಯಿಂದ ಕೆಲಸದ ವೇಳೆಯಲ್ಲಿ ಸಂಪರ್ಕಿಸಿ ಪಡೆಯಬಹುದು.

**ನಿಗದಿಪಡಿಸಿದ ದಿನಾಂಕವು ಈ ಕೆಳಗಿನಂತೆ ಇರುತ್ತದೆ:**

1. ಅರ್ಜಿಯನ್ನು ಸಲ್ಲಿಸುವ ಕೊನೆಯ ದಿನಾಂಕ ಕಛೇರಿ ವೇಳೆಯಲ್ಲಿ - 20 ರಿಂದ 22.07.2006.
2. ಖಾಲಿ ಟೆಂಡರ್ ಶೆಡ್ಯೂಲ್‌ಗಳನ್ನು ನೀಡುವ ದಿನಾಂಕ ಕಛೇರಿ ವೇಳೆಯಲ್ಲಿ - 23.07.2006.
3. ಭರ್ತಿ ಮತ್ತು ಮೊಹರು ಮಾಡಿದ ಟೆಂಡರುಗಳನ್ನು ಸ್ವೀಕರಿಸುವ ದಿನಾಂಕ (ಸಾಯಂಕಾಲ 4.00 ಗಂಟೆವರೆಗೆ) - 31.07.2006.
4. ಟೆಂಡರ್‌ಗಳನ್ನು ತೆರೆಯುವ ದಿನಾಂಕ ಸಾಧ್ಯವಿದ್ದಲ್ಲಿ (ಸಾಯಂಕಾಲ 5.00 ಗಂಟೆಗೆ) - 31.07.2006.

**ಹೆಚ್.ಎಂ. ಕಾಲೆಖಾನವರ್**
ಕಾರ್ಯನಿರ್ವಾಹಕ ಇಂಜಿನೀಯರ್,
ಲೋಕೋಪಯೋಗಿ ಇಲಾಖೆ,
ರಾಯಚೂರು ವಿಭಾಗ.

ಪಿ.ಆರ್.382

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ

## ಅಧಿಸೂಚನೆ

### ಸಂಖ್ಯೆ: ಸಿಆಸುಇ 88 ಆಸೇವ 2006, ಬೆಂಗಳೂರು, ದಿನಾಂಕ:27ನೇ ಜೂನ್, 2006

ಕರ್ನಾಟಕ ಗೆಜೆಟೆಡ್ ಪ್ರೊಬೇಷನರುಗಳ ನೇಮಕಾತಿ (ಸ್ಪರ್ಧಾತ್ಮಕ ಪರೀಕ್ಷೆಗಳ ಮೂಲಕ ನೇಮಕ) ನಿಯಮಗಳು 1997 ರಡಿಯಲ್ಲಿ ಕರ್ನಾಟಕ ಲೋಕಸೇವಾ ಆಯೋಗವು ಈ ಕೆಳಕಂಡ ಅಭ್ಯರ್ಥಿಗಳನ್ನು ಕೆ.ಎ.ಎಸ್. ಗ್ರೂಪ್-ಎ (ಕಿರಿಯ ಶ್ರೇಣಿ) ಹುದ್ದೆಗೆ ಆಯ್ಕೆ ಮಾಡಿ ಆಯ್ಕೆ ಪಟ್ಟಿಯನ್ನು ಅಧಿಸೂಚನೆ ಸಂಖ್ಯೆ: E(1)41/ 2005-06/ PSC ದಿನಾಂಕ:04.05.2006ರಂದು ಹೊರಡಿಸಿ, ದಿನಾಂಕ:05.05.2006ರ ರಾಜ್ಯಪತ್ರದ ವಿಶೇಷ ಪತ್ರಿಕೆಯಲ್ಲಿ ಪ್ರಕಟಿಸಿದೆ.

| ಕ್ರ. ಸಂ. | ಹೆಸರು | ವಿಳಾಸ |
|---|---|---|
| 1. | ಶ್ರೀ ಜಿ.ಎಲ್. ಪ್ರವೀಣ್ ಕುಮಾರ್ | ಬಿನ್ ಜಿ.ಆರ್. ಲೋಕೇಶಪ್ಪ, ಪೊಂಡಮಟ್ಟಿ, ಚನ್ನಗಿರಿ ತಾಲ್ಲೂಕು, ದಾವಣಗೆರೆ ಜಿಲ್ಲೆ-577213. |
| 2. | ಶ್ರೀ ವಿಜಯಮಹಾಂತೇಶ ಬಿ. ದಾನಮ್ಮನವರ್ | ರಣತೂರ್ ಅಂಚೆ, ಶಿರಹಟ್ಟಿ ತಾಲ್ಲೂಕು, ಗದಗ್ ಜಿಲ್ಲೆ-582120. |
| 3. | ಶ್ರೀ ಗೋವಿಂದರೆಡ್ಡಿ | ಕೇರಾಫ್ ಶಾಂತಿ ನಿವಾಸ, ಬಸವನಗರ, ಹನುಮಸಾಗರ ರಸ್ತೆ, ಇಳಕಲ್ ಅಂಚೆ, ಬಾಗಲಕೋಟೆ ಜಿಲ್ಲೆ-587125. |
| 4. | ಶ್ರೀ ಪ್ರಭುಲಿಂಗ ಕವಳಿಕಟ್ಟಿ | ನಂ.ಸಿ:142, ಹಿಡಕಲ್ ಡ್ಯಾಂ ಪೋಸ್ಟ್, ಹುಕ್ಕೇರಿ ತಾಲ್ಲೂಕು, ಬೆಳಗಾಂ ಜಿಲ್ಲೆ-591107. |
| 5. | ಶ್ರೀಮತಿ ಎಂ.ಎಲ್. ವೈಶಾಲಿ | ಶೆಟ್ಟಿ ಕೊಪ್ಪ ಅಂಚೆ, ಎನ್.ಆರ್.ಪುರ ತಾಲ್ಲೂಕು, ಚಿಕ್ಕಮಗಳೂರು ಜಿಲ್ಲೆ-577134. |
| 6. | ಶ್ರೀಮತಿ ಎಸ್.ರಮ್ಯ. | ನಂ.77, 4ನೇ ಮೈನ್, ಮಾರುತಿನಗರ ಮೌರ್ಯ ಸ್ಕೂಲ್, ಕಾಮಾಕ್ಷಿಪಾಳ್ಯ, ಬೆಂಗಳೂರು-560079. |
| 7. | ಶ್ರೀ ಎಸ್.ಎನ್. ಬಾಲಚಂದ್ರ | ನಂ.159, ಆರ್.ಎಂ.ಎಲ್. ರಸ್ತೆ, ಸೊಳ್ಳೆಪುರ ಅಂಚೆ, ಕೆ.ಆರ್.ಪೇಟೆ ತಾಲ್ಲೂಕು, ಮಂಡ್ಯ ಜಿಲ್ಲೆ-571423. |
| 8. | ಶ್ರೀಮತಿ ಡಿ. ಭಾರತಿ | ಕೋಂ ಹೆಚ್.ಪಿ. ಮಹದೇವಪ್ಪ ಭಾಮನ, ನಂ.52, ಚೀರನಹಳ್ಳಿ ರಸ್ತೆ, ಕುವೆಂಪುನಗರ, ಕೆ.ಆರ್.ನಗರ ಟೌನ್, ಮೈಸೂರು ಜಿಲ್ಲೆ-571602. |
| 9. | ಶ್ರೀ ಎ.ಎಂ.ಯೋಗೀಶ್ | ನಂ.786, ಅನುಗ್ರಹ, 2ನೇ ಕ್ರಾಸ್, ಟೌನ್ ಕ್ಲಬ್ ಹತ್ತಿರ, ಕೆ.ಆರ್.ಪೇಟೆ, ಮಂಡ್ಯ ಜಿಲ್ಲೆ-571426. |

| ಕ್ರ. ಸಂ. | ಹೆಸರು | ವಿಳಾಸ |
|---|---|---|
| 10. | ಶ್ರೀ ಪಿ.ಆರ್. ಶಿವಪ್ರಸಾದ್ | ನಂ.825, 24ನೇ ಮೈನ್, 2ನೇ ಹಂತ, ಜೆ.ಪಿ.ನಗರ, ಬೆಂಗಳೂರು-560078. |
| 11. | ಶ್ರೀ ಜಿ.ಎಂ ಗಂಗಾಧರಸ್ವಾಮಿ | ಗಣಪತಿಹಳ್ಳಿ, ಚುಂಚನಕುಪ್ಪೆ ಪೋಸ್ಟ್, ಬೆಂಗಳೂರು ದಕ್ಷಿಣ ತಾಲ್ಲೂಕು, ಬೆಂಗಳೂರು ನಗರ ಜಿಲ್ಲೆ-562130. |
| 12. | ಶ್ರೀಮತಿ ಕೆ. ವಿದ್ಯಾಕುಮಾರಿ | ನಂ.710 ಕೃಷ್ಣ ಬ್ಲಾಕ್, ನ್ಯಾಷನಲ್ ಗೇಮ್ಸ್ ವಿಲೇಜ್, ಕೋರಮಂಗಲ, ಬೆಂಗಳೂರು-560047. |
| 13. | ಶ್ರೀ ಕೆ. ನಾಗೇಂದ್ರ ಪ್ರಸಾದ್ | ಕುವೆಂಪು ಲೇಔಟ್, ಮುಳ್ಳುಸೋಗೆ, ಕುಶಾಲನಗರ ಅಂಚೆ, ಕೊಡಗು ಜಿಲ್ಲೆ-571234. |
| 14. | ಶ್ರೀ ಕುಮಾರ | ರಂಗೇನಹಳ್ಳಿ ದೊಡ್ಡೇನಹಳ್ಳಿ, ನಿಟ್ಟೂರು ಅಂಚೆ, ಸಾಲಗಾಮೆ ಹೋಬಳಿ, ಹಾಸನ ತಾಲ್ಲೂಕು ಮತ್ತು ಜಿಲ್ಲೆ-573219. |
| 15. | ಶ್ರೀ ಟಿ. ವೆಂಕಟೇಶ್ | ಮಂಡಿಬ್ಯಾಡರಹಳ್ಳಿ ಹಣಬೆ ಅಂಚೆ, ದೊಡ್ಡಬಳ್ಳಾಪುರ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ-561203. |
| 16. | ಶ್ರೀಮತಿ ಶಿಲ್ಪ | ಪ್ಲಾಟ್ -227, ನಿಜಲಿಂಗಪ್ಪ ದಂತ ಕಾಲೇಜು ಎದುರು, ಬನಶಂಕರಿ ಕಾಲೋನಿ, ಜಯನಗರ, ಗುಲ್ಬರ್ಗಾ-585105. |
| 17. | ಶ್ರೀಮತಿ ಕೆ.ಎಂ. ಗಾಯತ್ರಿ | ಕೋಂ ಕೆ.ಎಂ. ಪ್ರಸನ್ನಕುಮಾರ್, ನಂ.374, ಬಾಂಧವ್ಯಸ್ವಾಮಿ ವಿವೇಕಾನಂದ ಮಾರ್ಗ, ಕಾವೇರಿನಗರ, ಮಂಡ್ಯ-571401. |
| 18. | ಶ್ರೀಮತಿ ಬಿ.ಆರ್. ಪೂರ್ಣಿಮ | ಕೋಂ ಸಿ.ಎಸ್. ಸುದರ್ಶನ್, ನಂ.1:329, ಗುರುಕೃಪ ನಿಲಯ, ವಿ.ವಿ.ರಸ್ತೆ, ಕೆ.ಆರ್.ನಗರ, ಮೈಸೂರು ಜಿಲ್ಲೆ-571602. |
| 19. | ಶ್ರೀ ಜಯವಿಭವ ಸ್ವಾಮಿ | ಬಿನ್ ಲೇಟ್ ಸಿ.ಎಂ. ಯರೇಸೀಮೆ, ನಂ.597, 7ನೇ ಮೈನ್, 2ನೇ ಕ್ರಾಸ್, ವಿಜಯನಗರ, ಬೆಂಗಳೂರು-560040. |
| 20. | ಶ್ರೀ ಸಿ.ವಿಜಯಕುಮಾರ್ | ನಂ.115, ಪ್ರಾಚೀನ ನಿಲಯ, ಬಿ.ನಾರಾಯಣಪುರ, ವೈಟ್ ಫೀಲ್ಡ್ ರಸ್ತೆ, ಬೆಂಗಳೂರು-560016. |

2) ಮೇಲ್ಕಂಡ ಅಭ್ಯರ್ಥಿಗಳನ್ನು ರೂ.8000-13440 ರ ವೇತನ ಶ್ರೇಣಿಯ ಕೆ.ಎ.ಎಸ್. ಸಮೂಹ-ಎ ಕಿರಿಯ ಶ್ರೇಣಿ ಹುದ್ದೆಗೆ ಪರಿವೀಕ್ಷಣೆಯ ಮೇಲೆ (on probation) ಈ ಮೂಲಕ ನೇಮಕ ಮಾಡಲಾಗಿದೆ.

3) ಪರೀಕ್ಷಾರ್ಥಿಗಳ ಪರೀಕ್ಷಾರ್ಥ ಅವಧಿಯು ಎರಡು ವರ್ಷಗಳಾಗಿರುತ್ತವೆ. ಈ ಅವಧಿಯಲ್ಲಿ ಪರೀಕ್ಷಾರ್ಥಿಗಳು ಕೆ.ಎ.ಎಸ್. ಗ್ರೂಪ್-ಎ (ಕಿರಿಯ ಶ್ರೇಣಿ) ಹುದ್ದೆಗೆ ನಿಗದಿಪಡಿಸಿರುವ ಎಲ್ಲಾ ಇಲಾಖಾ ಪರೀಕ್ಷೆಗಳಲ್ಲಿ ತೇರ್ಗಡೆಯಾಗಬೇಕು.

4) ಈ ನೇಮಕಾತಿಯು ಕರ್ನಾಟಕ ಆಡಳಿತ ನ್ಯಾಯಮಂಡಳಿಯು ಅರ್ಜಿ ಸಂಖ್ಯೆ:3528/ 2006ರಲ್ಲಿ ಕೆಳಕಂಡ ಮಧ್ಯಂತರ ತೀರ್ಪು ನೀಡಿದ್ದು, ಅದರಲ್ಲಿ ನ್ಯಾಯಾಲಯವು ನೀಡುವ ಅಂತಿಮ ತೀರ್ಪಿಗೊಳಪಟ್ಟಿರುತ್ತದೆ.

"That any appointment pursuant to Notification bearing No.E(1)41/ 2005-06/ PSC Dated:04.05.2006 shall be subject to the result of this application".

5) ಈ ಅಧಿಸೂಚನೆಯನ್ನು ನೊಂದಾಯಿತ ಅಂಚೆ ಮುಖಾಂತರ ರವಾನಿಸಿದ ದಿನಾಂಕದಿಂದ 15 ದಿನಗಳೊಳಗೆ ಕರ್ತವ್ಯಕ್ಕೆ ಹಾಜರಾಗತಕ್ಕದ್ದು. ಇದಕ್ಕೆ ತಪ್ಪಿದಲ್ಲಿ ಅಭ್ಯರ್ಥಿಯ ನೇಮಕಾತಿಯು ರದ್ದಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ. ಪ್ರಭು**

ಪಿ.ಆರ್.383

ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).

**ತೋಟಗಾರಿಕೆ ಉಪ ನಿರ್ದೇಶಕರವರ ಕಛೇರಿ, ಕಬ್ಬನ್ ಉದ್ಯಾನವನ, ಬೆಂಗಳೂರು-1**

**ಟೆಂಡರ್ ಪ್ರಕಟಣೆ**

**ಸಂಖ್ಯೆ: ತೋಉನಿ: ಕಉ: ಬಿಜಿಟಿ:ವಿನಿ2:4:06-07, ಬೆಂಗಳೂರು, ದಿನಾಂಕ:22ನೇ ಜೂನ್, 2006**

**ವಿಷಯ:** ಕಬ್ಬನ್ ಉದ್ಯಾನವನದ ರಸ್ತೆಗಳಲ್ಲಿ ಕಸ ಕಡ್ಡಿ ಹಾಗೂ ಮರದ ಕೆಳಗೆ ಬಿದ್ದಿರುವ ಎಲೆಗಳು ಹಾಗೂ ಪ್ಲಾಸ್ಟಿಕ್ ಚೀಲ ಇತ್ಯಾದಿ ತ್ಯಾಜ್ಯ ವಸ್ತುಗಳನ್ನು ಗುಡಿಸಿ ಸ್ವಚ್ಛ ಮಾಡುವ ಬಗ್ಗೆ.

ಕಬ್ಬನ್ ಉದ್ಯಾನವನ ಹಾಗೂ ಸುತ್ತ ಮುತ್ತಲಿನ ರಸ್ತೆಗಳನ್ನು ಗುತ್ತಿಗೆ ಆಧಾರದ ಮೇಲೆ ಕಸ ಗುಡಿಸಿ ಸ್ವಚ್ಛತೆ ಮಾಡಿಸಲು 2006-07ನೇ ಸಾಲಿಗೆ ಟೆಂಡರ್‌ನ್ನು ಆಹ್ವಾನಿಸಲಾಗಿದೆ. ಇಚ್ಛಿಸುವವರು ಪ್ರತಿ ಮಾಹೆಗೆ ತಗಲುವ ವೆಚ್ಚ ದರ ಸೂಚಿಸಲು ತಿಳಿಸಿದೆ.

| ವಿವರಗಳು | ವಿಸ್ತೀರ್ಣ | ಮಾಹೆಯಾನ ದರ |
|---|---|---|
| ಕಬ್ಬನ್ ಉದ್ಯಾನವನದಲ್ಲಿ ಬರುವ ರಸ್ತೆಗಳು ಅನುಬಂಧ-1ರಲ್ಲಿ ತಿಳಿಸಿರುವ ವಿವರಗಳಂತೆ ಕಸ ಕಡ್ಡಿಗಳನ್ನು ಪ್ಲಾಸ್ಟಿಕ್ ಚೀಲ ಇತರೆ ತ್ಯಾಜ್ಯ ವಸ್ತುಗಳನ್ನು ಗುಡಿಸಿ ಸ್ವಚ್ಛ ಮಾಡುವುದು. ಸಿದ್ದಲಿಂಗಯ್ಯ ಸರ್ಕಲ್, ಸೆಂಟ್ರಲ್ ಲೈಬ್ರರಿ ಸರ್ಕಲ್, ಗೋಪಾಲಗೌಡ ಸರ್ಕಲ್, ಸೆಂಚುರಿ ಕ್ಲಬ್ ಹತ್ತಿರ ಎಲೆ ಕಸ ಪ್ಲಾಸ್ಟಿಕ್ ಚೀಲ ಇತರೆ ತ್ಯಾಜ್ಯ ವಸ್ತುಗಳನ್ನು ಗುಡಿಸಿ ತೆಗೆಸುವುದು. | ಅನುಬಂಧ-1ರಲ್ಲಿ ನಮೂದಿಸಿದಂತೆ | |

| | | | |
|---|---|---|---|
| 1. | ಟೆಂಡರ್ ಫಾರಂಗಳನ್ನು ಪಡೆಯುವ ದಿನಾಂಕ | : | 5-8-2006 ರಿಂದ 09-8-2006ರ ಸಂಜೆ 5.00 ಗಂಟೆಯವರೆಗೆ |
| 2. | ಮೊಹರಾದ ಟೆಂಡರ್‌ಗಳನ್ನು ಸ್ವೀಕರಿಸುವ ಕೊನೆಯ ದಿನಾಂಕ | : | 10-8-2006 ಸಂಜೆ 4.00 ಗಂಟೆಯವರೆಗೆ |
| 3. | ಟೆಂಡರ್‌ಗಳನ್ನು ತೆರೆಯುವ ದಿನಾಂಕ | : | 10-8-2006 ಸಂಜೆ 5.00 ಗಂಟೆಗೆ |
| 4. | ಟೆಂಡರ್ ಫಾರಂ ಬೆಲೆ | : | ರೂ. 500-00 (ಐದು ನೂರು ಮಾತ್ರ) |

ಹೆಚ್ಚಿನ ಮಾಹಿತಿಗಳನ್ನು ತೋಟಗಾರಿಕೆ ಉಪ ನಿರ್ದೇಶಕರು, ಕಬ್ಬನ್ ಉದ್ಯಾನವನ, ಬೆಂಗಳೂರುರವರ ಕಛೇರಿಯಲ್ಲಿ ಕಛೇರಿ ವೇಳೆಯಲ್ಲಿ ಪಡೆಯಬಹುದು.

**ತೋಟಗಾರಿಕೆ ಉಪ ನಿರ್ದೇಶಕರು,**
**ಕಬ್ಬನ್ ಉದ್ಯಾನವನ, ಬೆಂಗಳೂರು-1.**

**:ನಿಬಂಧನೆ ಮತ್ತು ಷರತ್ತುಗಳು:**

1. ಟೆಂಡರ್ ಫಾರಂನ್ನು ದಿನಾಂಕ: 5-8-2006ರಿಂದ 9-8-2006 ರವರೆಗೆ ಕಛೇರಿ ಕೆಲಸದ ವೇಳೆಯಲ್ಲಿ ಪಡೆಯಬಹುದು. ಟೆಂಡರ್ ಫಾರಂ ಬೆಲೆ ರೂ.500=00.
2. ಟೆಂಡರ್ ಜೊತೆಯಲ್ಲಿ ರೂ.50000=00 ಗಳ ಡಿಮ್ಯಾಂಡ್ ಡ್ರಾಫ್ಟನ್ನು ಲಗತ್ತಿಸಬೇಕು. ಡಿಮ್ಯಾಂಡ್ ಡ್ರಾಫ್ಟನ್ನು ತೋಟಗಾರಿಕೆ ನಿರ್ದೇಶಕರು, ಹಾಗೂ ಸದಸ್ಯ ಕಾರ್ಯದರ್ಶಿಗಳು. ಬೆಂಗಳೂರು ಗಾರ್ಡನ್ ಟ್ರಸ್ಟ್, ಬೆಂಗಳೂರು ರವರಿಗೆ ಪಾವತಿಯಾಗುವಂತೆ ಬೆಂಗಳೂರಿನ ಯಾವುದಾದರೂ ರಾಷ್ಟ್ರೀಕೃತ ಬ್ಯಾಂಕಿನಿಂದ ಪಡೆದಿರಬೇಕು.
3. ಮೊಹರಾದ ಟೆಂಡರ್‌ಗಳನ್ನು ದಿನಾಂಕ: 10-8-2006 ರಂದು ಸಂಜೆ 4.00 ಗಂಟೆಯವರೆಗೆ ಸ್ವೀಕರಿಸಲಾಗುವುದು ನಿಗದಿಯಾದ ವೇಳೆಯ ನಂತರ ಬಂದ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.
4. ಮೊಹರಾದ ಟೆಂಡರ್‌ಗಳನ್ನು ದಿನಾಂಕ 10-8-2006 ರಂದು ಸಂಜೆ 5.00 ಗಂಟೆಗೆ ಕೆಳಸಹಿದಾರರ ಕಛೇರಿಯಲ್ಲಿ ಟೆಂಡರ್‌ದಾರರ ಸಮ್ಮುಖದಲ್ಲಿ ತೆರೆಯಲಾಗುವುದು, ಟೆಂಡರ್‌ಗಳನ್ನು ಯಾವುದೇ ಕಾರಣ ನೀಡದೆ ತಿರಸ್ಕರಿಸುವ ಮತ್ತು ಸ್ವೀಕರಿಸುವ ಪೂರ್ಣಅಧಿಕಾರವು ತೋಟಗಾರಿಕೆ ನಿರ್ದೇಶಕರದೇ ಅಂತಿಮವಾಗಿರುತ್ತದೆ. ಹೆಚ್ಚಿನ ವಿವರಗಳನ್ನು ಕಛೇರಿ ವೇಳೆಯಲ್ಲಿ ಪಡೆಯಬಹುದು.
5. ಟೆಂಡರ್ ಗಳನ್ನು ಕೊಡುವಾಗ ಸೀಲ್ ಮಾಡಿರಬೇಕು ಮತ್ತು ಲಕೋಟೆಯ ಮೇಲೆ ಕಬ್ಬನ್ ಉದ್ಯಾನವನದ ರಸ್ತೆಗಳನ್ನು ಗುತ್ತಿಗೆ ಆಧಾರದ ಮೇಲೆ ಸ್ವಚ್ಛತೆ ಮಾಡಿಸುವ ಬಗ್ಗೆ ಟೆಂಡರ್ ಎಂದು ಬರೆದಿರಬೇಕು.
6. ಟೆಂಡರ್ ಜೊತೆಯಲ್ಲಿ ಠೇವಣಿ ಹಣ ರೂ.50,000=00 ಗಳ ಡಿ.ಡಿ. ಇಲ್ಲದಿದ್ದಲ್ಲಿ ಅಂತಹ ಟೆಂಡರ್ ಗಳನ್ನು ತಿರಸ್ಕರಿಸಲಾಗುವುದು.
7. ಕಬ್ಬನ್ ಉದ್ಯಾನವನದ ಒಳಗಡೆ (ಅನುಬಂಧ-1 ರಲ್ಲಿ ಲಗತ್ತಿಸಿದ ವಿವರದ ರೀತಿ) ಇರುವ ರಸ್ತೆಗಳನ್ನು ಪ್ರತಿನಿತ್ಯ ಹೊರ ಮತ್ತು ಒಳಗೆ ಸ್ವಚ್ಛವಾಗಿ ಗುಡಿಸಬೇಕು ಇದಕ್ಕೆ ಕೆಲಸಗಾರರನ್ನು ನೇಮಕಾತಿ ಮಾಡಿದ ವಿವರಗಳನ್ನು ಸಂಬಂಧಿಸಿದ ಗುತ್ತಿಗೆದಾರರು ಸಹಾಯಕ ತೋಟಗಾರಿಕೆ ಅಧಿಕಾರಿ, ಕಬ್ಬನ್ ಉದ್ಯಾನವನ ಹಾಗೂ ಶೇಷಾದ್ರಿ ವಿಭಾಗ ರವರ ಪರಿಶೀಲನೆಗೆ ಒದಗಿಸಬೇಕು ಹಾಗೂ ಅವರಿಂದ ಪ್ರತಿ ತಿಂಗಳು ತೃಪ್ತಿಕರಣ ದೃಢೀಕರಣ ಪಡೆಯತಕ್ಕದ್ದು.
8. ಕಬ್ಬನ್ ಉದ್ಯಾನವನದಲ್ಲಿ ಬರುವ ಸಿದ್ದಲಿಂಗಯ್ಯ ಸರ್ಕಲ್, ಸೆಂಟ್ರಲ್ ಲೈಬ್ರರಿ ಸರ್ಕಲ್, ಗೋಪಾಲಗೌಡ ಸರ್ಕಲ್, ಸೆಕಂಚುರಿ ಕ್ಲಬ್ ಹತ್ತಿರ ಹಾಗೂ ಅನುಬಂಧ-1 ರಲ್ಲಿ ವಿವರಿಸಿದ ರಸ್ತೆಗಳಲ್ಲಿ ಸ್ವಚ್ಛತೆ ಹಾಗೂ ಮರದ ಕೆಳಗೆ ಹಾಗೂ ಹುಲ್ಲುಹಾಸಿನ ಮೇಲೆ ಬಿದ್ದಿರುವ ಕಸ ಕಡ್ಡಿಗಳನ್ನು ನಿಗದಿಪಡಿಸಿದ ಕಾಂಪೋಸ್ಟ್ ಗುಂಡಿಗೆ ಸಾಗಿಸಬೇಕು ಹಾಗೂ ಪ್ಲಾಸ್ಟಿಕ ಚೀಲ ಇತರೆ ತ್ಯಾಜ್ಯ ವಸ್ತುಗಳನ್ನು ಸ್ವಂತ ವಾಹನದಲ್ಲಿ ದೂರ ಸಾಗಿಸಬೇಕು.
9. ಈ ಗುತ್ತಿಗೆ ಕೆಲಸವನ್ನು ನಿರ್ವಹಿಸಿದ 2 ವರ್ಷದ ಅವಧಿಗೆ ದೃಡೀಕರಣ ಪತ್ರವನ್ನು ನೀಡಬೇಕು.
10. ಯಶಸ್ವಿ ಟೆಂಡರ್ ದಾರರು ಟ್ರಿಪರ್ ಲಾರಿ ಅಥವಾ ಟ್ರ್ಯಾಕ್ಟರ್ ಹೊಂದಿರತಕ್ಕದ್ದು ಮತ್ತು ವಾಹನದ ದಾಖಲೆಗಳ ಜೆರಾಕ್ಸ್ ಪ್ರತಿಗಳನ್ನು ಹೊಂದಿರತಕ್ಕದ್ದು.
11. ಕಳೆದ ಸಾಲಿನ ಆದಾಯದ ದೃಢೀಕರಣ ಪತ್ರವನ್ನು ಲಗತ್ತಿಸಬೇಕು.
12. ಕನಿಷ್ಟ 5.00 ಲಕ್ಷಗಳ ಬ್ಯಾಂಕ್ ಸಾಲ್ವೆನ್ಸಿ ಲಗತ್ತಿಸಿರಬೇಕು.
13. ಯಶಸ್ವಿ ಟೆಂಡರ್ ದಾರರು ವಾರ್ಷಿಕ ಗುತ್ತಿಗೆ ಕೆಲಸವನ್ನು ನಿರ್ವಹಿಸಲು ನಮೂದಿಸಿದ ಟೆಂಡರ್ ಮೊತ್ತವನ್ನು 12 ಸಮ ಕಂತುಗಳಲ್ಲಿ ಪ್ರತಿ ತಿಂಗಳು ಕೆಲಸ ತೃಪ್ತಿಕರವಾಗಿ ನಿರ್ವಹಿಸಿದ ನಂತರ ಹಣ ಪಾವತಿಗೆ ಕ್ರಮ ಜರುಗಿಸಲಾಗುವುದು ಹಾಗೂ ನಿಯಮದಂತೆ ಸಾಲದ ಬಿಲ್ಲಿನಲ್ಲಿ ಅನ್ವಯವಾಗುವ ತೆರಿಗೆಗಳನ್ನು ಕಟಾಯಿಸಲಾಗುವುದು.
14. ಪಾಲುದಾರಿಕೆ ಸಂಸ್ಥೆಯಿಂದ ಟೆಂಡರ್ ಸಲ್ಲಿಸಿದ್ದಲ್ಲಿ ಪಾಲುದರಿಕೆ ಬಗ್ಗೆ ಟೆಂಡರ್ ಸಲ್ಲಿಸುವ ಮೊದಲೇ ನೊಂದಾಣಿ ಮಾಡಿಸಿರುವ ಪ್ರತಿ ಲಗತ್ತಿಸಿರಬೇಕು .
15. ಸಂಸ್ಥೆಯಿಂದ ಟೆಂಡರ್ ಸಲ್ಲಿಸಲ್ಪಟ್ಟರೆ ಸಂಸ್ಥೆಯ ಹೆಸರಿನಲ್ಲಿ ವಾಹನ ನೊಂದಾಣಿಯಾಗಿರಬೇಕು ಅಥವಾ ವ್ಯಕ್ತಿಯಿಂದ ಟೆಂಡರ್ ಸಲ್ಲಿ**ಸಿದ**ಲ್ಲಿ ವ್ಯಕ್ತಿಯ ಹೆಸರಿನಲ್ಲಿ ವಾಹನ ನೊಂದಾಣಿಯಾಗಿರಬೇಕು.
16. ಪಾಲುದಾರಿಕೆ ಸಂಸ್ಥೆಯಿಂದ ಟೆಂಡರ್ ಸಲ್ಲಿಸಲ್ಪಟ್ಟಲ್ಲಿ ವಾಹನ ಮಾಲೀಕತ್ವವು ಪಾಲುದಾರಿಕೆ ಸಂಸ್ಥೆಯ ಹೆಸರಿನಲ್ಲಿ ನೊಂದಾಣಿಯಾಗಿರಬೇಕು.
17. ಗುತ್ತಿಗೆ ಕೆಲಸವನ್ನು ಸರಿಯಾಗಿ ನಿರ್ವಹಿಸದಿದ್ದ ಪಕ್ಷದಲ್ಲಿ ಮೊದಲ ಭಾರಿಗೆ ಶೇ.10 ಎರಡನೇ ಭಾರಿಗೆ ಶೇ.20 ಹಾಗೂ ಮೂರನೇ ಬಾರಿಗೆ ಶೇ.30ರ ಒಟ್ಟು ಅನುಮೋದಿತ ವೆಚ್ಚದ ದಂಡನೆಯನ್ನು ವಿಧಿಸಲಾಗುವುದು. (ಸದರಿ ಮೊಬಲಗನ್ನು ತೋಟಗಾರಿಕೆ ಉಪ ನಿರ್ದೇಶಕರವರು ನಿರ್ಧರಿಸಿಕೊಳ್ಳುವುದು) ಇಷ್ಟಾಗಿಯೂ ಕೆಲಸ ಸಮರ್ಪಕವಾಗಿಲ್ಲದಿದ್ದಲ್ಲಿ ಗುತ್ತಿಗೆಯನ್ನು ರದ್ದುಪಡಿಸಿ ಠೇವಣಿಯನ್ನು ಮುಟ್ಟುಗೋಲು ಹಾಕಿಕೊಳ್ಳಲಾಗುವುದು ಹಾಗೂ ಅಂತಹ ಸಂಸ್ಥೆ/ ವ್ಯಕ್ತಿಯನ್ನು ಕಪ್ಪುಪಟ್ಟಿಗೆ ಸೇರಿಸಲು ಕ್ರಮ ವಹಿಸಲಾಗುವುದು.

18. ಯಶಸ್ವಿ ಟೆಂಡರ್‌ದಾರರು ಗುತ್ತಿಗೆ ಬಗ್ಗೆ ಷರತ್ತು ಮತ್ತು ನಿಬಂಧನೆಗಳನ್ನು ಒಪ್ಪಿರುವ ಬಗ್ಗೆ ರೂ.200=00 ಛಾಪಾ ಕಾಗದದ ಮೇಲೆ ಕರಾರು ಬರೆದು ಕೊಡಬೇಕು.
19. ಈ ಕಛೇರಿಯಿಂದ ಸದರಿ ಗುತ್ತಿಗೆಯನ್ನು ನಿರ್ವಹಿಸಲು ಆದೇಶ ಪಡೆದ ದಿನಾಂಕ ನಿಗಧಿತ ಅವಧಿಯ ನಂತರ ಯಾವುದೇ ಕಾರಣಕ್ಕೂ ಗುತ್ತಿಗೆಯ ಅವಧಿಯನ್ನು ಮುಂದುವರಿಸಲು ಸಾಧ್ಯವಿರುವುದಿಲ್ಲ.
20. ಸದರಿ ಗುತ್ತಿಗೆ ಕೆಲಸವನ್ನು ಕಳಪೆಯಾಗಿ ನಿರ್ವಹಣೆ ಮಾಡಿದಲ್ಲಿ ಗುತ್ತಿಗೆ ಕರಾರನ್ನು ರದ್ದುಪಡಿಸಿ, ಠೇವಣಿಯನ್ನು ಮುಟ್ಟುಗೋಲು ಹಾಕಿಕೊಳ್ಳಲಾಗುವುದು, ಹಾಗೂ ಕಾನೂನಿನಡಿಯಲ್ಲಿ ಕ್ರಮ ಜರುಗಿಸಿ ದಂಢ ವಿಧಿಸಲಾಗುತ್ತದೆ.
21. ಕೆಲಸ ತೃಪ್ತಿಕರವಾಗಿಲ್ಲದಿದ್ದಲ್ಲಿ ಗುತ್ತಿಗೆಯ ಅವಧಿಯನ್ನು ಯಾವುದೇ ಕಾರಣ ನೀಡದೇ ತೋಟಗಾರಿಕೆ ನಿರ್ದೇಶಕರು ರದ್ದುಪಡಿಸುವ ಅಧಿಕಾರ ಹೊಂದಿರುತ್ತಾರೆ.
22. ತೋಟಗಾರಿಕೆ ನಿರ್ದೇಶಕರು, ತೋಟಗಾರಿಕೆ ಉಪ ನಿರ್ದೇಶಕರು, ತುರ್ತು ಸಂದರ್ಭದಲ್ಲಿ ಸ್ವಚ್ಛತೆ ಬಗ್ಗೆ ನೇಮಿಸುವ ಕೆಲಸವನ್ನು ಸಹ ನಿರ್ವಹಿಸುವುದು.
23. ಮಹಾನಗರ ಪಾಲಿಕೆಯಿಂದ ಸದರಿ ಸ್ವಚ್ಚತಾ ಕೆಲಸವನ್ನು ಪ್ರಾರಂಭ ಮಾಡಿದ ದಿನದಂದೇ ಆದೇಶವು ತಾನಾಗಿಯೇ ರದ್ದಾಗುತ್ತದೆ ಎಂದು ಭಾವಿಸತಕ್ಕದ್ದು.

ತೋಟಗಾರಿಕೆ ಉಪ ನಿರ್ದೇಶಕರು,
ಪಿ.ಆರ್.384 ಕಬ್ಬನ್ ಉದ್ಯಾನವನ, ಬೆಂಗಳೂರು-1.

## ತೋಟಗಾರಿಕೆ ಉಪ ನಿರ್ದೇಶಕರವರ ಕಛೇರಿ, ಕಬ್ಬನ್ ಉದ್ಯಾನವನ, ಬೆಂಗಳೂರು-1
## ಟೆಂಡರ್ ಆಹ್ವಾನ ಪ್ರಕಟಣೆ
## ಸಂಖ್ಯೆ: ತೋಉನಿ: ಕಉ:ವಿನಿ2:3:2006-07, ಬೆಂಗಳೂರು, ದಿನಾಂಕ:22ನೇ ಜೂನ್, 2006

ತೋಟಗಾರಿಕೆ ಉಪ ನಿರ್ದೇಶಕರು, ಕಬ್ಬನ್ ಉದ್ಯಾನವನ, ಇವರ ಕಛೇರಿ ಅಧೀನದಲ್ಲಿ ಬರುವ ಕಬ್ಬನ್ ಉದ್ಯಾನವನ ನರ್ಸರಿ, ಶೇಷಾದ್ರಿ ವಿಭಾಗ, ರಾಜಭವನ ಉದ್ಯಾನವನ, ವಿಧಾನಸೌಧ ಉದ್ಯಾನವನ, ಹಾಗೂ ಇಂದಿರಾಗಾಂಧಿ ಸಂಗೀತ ಕಾರಂಜಿ ವಿಭಾಗ, ಕುಮಾರಕೃಪ ಹಾಗೂ ಬಾಲಬ್ರೂಯಿ ವಿಭಾಗದ ಉದ್ಯಾನವನಗಳಲ್ಲಿ ಹಾಲಿ ಇರುವ ಕೊಳವೆ ಬಾವಿಗಳು, ತೆರೆದ ಬಾವಿಗಳ ಮೂಲಕ ವಿವಿಧ ಉದ್ಯಾನವನದ ನಿರ್ವಹಣೆಗೆ ನೀರು ಸರಬರಾಜು ಮಾಡಲು ಕೆಳಕಂಡ ವಿದ್ಯುಚ್ಛಕ್ತಿ ಮೋಟಾರ್,ಲಾನ್‌ಮೂವರ್ ಮೋಟಾರ್, ಮತ್ತು ಸ್ಪ್ರೀಕಲರ್‌ಗಳನ್ನು ದುರಸ್ತಿ ಮತ್ತು ನಿರ್ವಹಣೆಯನ್ನು ಗುತ್ತಿಗೆ ಆಧಾರದ ಮೇಲೆ ಆದೇಶ ನೀಡಿದ ದಿನಾಂಕದಿಂದ ಒಂದು ವರ್ಷ ಅವಧಿಗೆ ವಾರ್ಷಿಕ ನಿರ್ವಹಿಸಲು ಕ್ಲಾಸ್–1 ವಿದ್ಯುತ್ ಗುತ್ತಿಗೆದಾರರಿಂದ ಟೆಂಡರ್‌ಗಳನ್ನು ಆಹ್ವಾನಿಸಲಾಗಿದೆ. ಆಸಕ್ತಿಯುಳ್ಳ ಗುತ್ತಿಗೆದಾರರು ನಿಗಧಿತ ಟೆಂಡರ್ ಫಾರಂಗಳನ್ನು ಈ ಕಛೇರಿಯಿಂದ ಖರೀದಿಸಿ ಗುತ್ತಿಗೆ ಕೆಲಸಕ್ಕೆ ತಮ್ಮ ಕನಿಷ್ಟ ದರಗಳನ್ನು ನಮೂದಿಸಿ ಟೆಂಡರ್‌ಗಳನ್ನು ಮೊಹರು ಮಾಡಿದ ಲಕೋಟೆಯಲ್ಲಿ "ಕಬ್ಬನ್ ಉದ್ಯಾನವನ ಅಧೀನ ವಿದ್ಯುತ್ ಮೋಟಾರ್ ಹಾಗೂ ಕಾರಂಜಿಗಳ ನಿರ್ವಹಣೆಗೆ ಟೆಂಡರ್" ಎಂದು ನಮೂದಿಸಿ ದಿನಾಂಕ:3.08.2006 ರೊಳಗೆ ಸಂಜೆ 4.00 ಗಂಟೆಯೊಳಗೆ ಈ ಕಛೇರಿಗೆ ತಲುಪುವಂತೆ ಆಸಕ್ತಿ ಇದ್ದವರು ಸಲ್ಲಿಸಬಹುದಾಗಿದೆ.

**ವಿವಿಧ ವಿಭಾಗಗಳಲ್ಲಿ ನಿರ್ವಹಿಸಬೇಕಾದ ಕೆಲಸಗಳ ವಿವರ**

| ಕ್ರಮ ಸಂಖ್ಯೆ | ವಿದ್ಯುತ್ ಮೋಟಾರ್ ಮತ್ತು ಪಂಪ್‌ಸೆಟ್ ಮತ್ತು ಕಾರಂಜಿಯ ವಿವರ | ಪಂಪ್‌ಸೆಟ್ ಕೊಳವೆ ಬಾವಿ, ತೆರೆದ ಬಾವಿ ಇರುವ ಸ್ಥಳ |
|---|---|---|
| 1 | 2 | 3 |
| 1) | ಎ) ಕಬ್ಬನ್ ಉದ್ಯಾನವನ ನರ್ಸರಿ | |
| | 1) 1 ಹೆಚ್‌ಪಿ ಕ್ರಾಮಟನ್ ಮೋನೋಬ್ಲಾಕ್ ಪಂಪ್‌ಸೆಟ್ | 1 ಸಂಖ್ಯೆ |
| | 2) 1 ಹೆಚ್‌ಪಿ ಸುಗುಣ ಮೋನೋಬ್ಲಾಕ್ | 1 ಸಂಖ್ಯೆ |
| | 3) 1 ಹೆಚ್‌ಪಿ ಟೆಕ್ಸ್‌ಮೊ ಮೋನೋಬ್ಲಾಕ್ | 1 ಸಂಖ್ಯೆ |
| | 4) 3ಹೆಚ್‌ಪಿ 17 ಸ್ಟೇಜ್ ಅಟ್ಲಾಂಟಾ ಸಬ್‌ಮರ್ಸಿಬಲ್ ಪಂಪ್ | 1 ಸಂಖ್ಯೆ |
| | 5) 5ಹೆಚ್‌ಪಿ ಲಾನ್ ಮೂವರ್ಸ್ | 1 ಸಂಖ್ಯೆ |
| | 6) 3 ಹೆಚ್‌ಪಿ ಟೆಕ್‌ಮೊ ಮೋನೋಬ್ಲಾಕ್ ಪಂಪ್‌ಸೆಟ್ (ರಾಣಿ ಪಾರ್ಕ್‌ನಲ್ಲಿನ) | 1 ಸಂಖ್ಯೆ |
| | 7) 2 ಹೆಚ್‌ಪಿ ಲಾನ್‌ಮೂವರ್ | |
| | 8) ಪೈಪ್‌ಲೈನ್ಸ್ ಗೇಜ್ ವಾಲ್ವ್ಸ್, ಸ್ಟಾರ್ಟ್‌ರ್, ಪ್ಲಂಬಿಂಗ್ ವರ್ಕ ಕೇಬಲ್ ರಿಪೇರಿ. | 2 ಸಂಖ್ಯೆ |
| | 9) ಉಪ ನಿರ್ದೇಶಕರ ಕೊಠಡಿ,ಸಹಾಯಕ ತೋಟಗಾರಿಕೆ ಅಧಿಕಾರಿ ಕಬ್ಬನ್ ಪಾರ್ಕ್‌ರವರ ಕೊಠಡಿಯಲ್ಲಿರುವ ಹಾಗೂ ಕಛೇರಿಯಲ್ಲಿರುವ ಟ್ಯೂಬುಲೈಟ್‌ಗಳು, ಚೌಕಗಳು, ಸ್ಟಾಟರ್‌ಗಳು ಮತ್ತು ಫ್ಯಾನ್‌ಗಳ ದುರಸ್ತಿ ಹಾಗೂ ನಿರ್ವಹಣೆ | |
| 2) | **ಕಂಠೀರವ ಕ್ರೀಡಾಂಗಣ** | |
| | 1) 30 ಹೆಚ್‌ಪಿ ಕಿರ್ಲೋಸ್ಕರ್ ಮೋಟಾರ್ ಪಂಪ್‌ಸೆಟ್ | 1 ಸಂಖ್ಯೆ |
| | 2) 30 ಹೆಚ್‌ಪಿ ಎನ್.ಜಿ.ಇ.ಎಫ್. ಮೋಟಾರ್ ಪಂಪ್‌ಸೆಟ್ | 1 ಸಂಖ್ಯೆ |
| | 3) 5 ಹೆಚ್‌ಪಿ ಸಬ್‌ಮರ್ಸಿಬಲ್ ಪಂಪಸೆಟ್ ಮತ್ತು ಪ್ಯಾನೆಲ್ ಬೋರ್ಡ್ಸ್ | 3 ಸಂಖ್ಯೆ |
| | 4) 30 ಹೆಚ್.ಪಿ. ಸ್ಟಾರ್ಟ್ರ್ಸ್, ಮೈನ್ ಸ್ವೀಚಸ್ ಇತ್ಯಾದಿ. | 2 ಸೆಟ್ |

| 1 | 2 | 3 |
|---|---|---|
| 3) | **ಮಹಾರಾಜ ಪ್ರತಿಮೆ ಕಾರಂಜಿ** | |
| | 1) 10 ಹೆಚ್‌ಪಿ ಸೋನಾ ಓಪನ್‌ವೆಲ್ ಸಬ್‌ಮರ್ಸಿಬಲ್ ಪಂಪ್‌ಸೆಟ್ ಪ್ಯಾನಲ್ ಬೋರ್ಡ್ | 1 ಸಂಖ್ಯೆ |
| | 2) 1 ಹೆಚ್‌ಪಿ ಸುಗುಣಾ ಮೋನೋಬ್ಲಾಕ್ ಪಂಪ್‌ಸೆಟ್ (ಹೈಕೋರ್ಟ್ ಗಾರ್ಡನ್ ಬಳಿ) | 1 ಸಂಖ್ಯೆ |
| | 3) 1 ಹೆಚ್‌ಪಿ ಕ್ರಾಮ್‌ಟನ್ ಮೋನೋಬ್ಲಾಕ್ ಪಂಪ್‌ಸೆಟ್ (ಹೈಕೋರ್ಟ್ ಗಾರ್ಡನ್ ಬಳಿ) | 1 ಸಂಖ್ಯೆ |
| | 4) ಪೈಪ್‌ಲೈನ್ಸ್, ಗೇಟ್‌ವಾಲ್ಸ್ ಇತ್ಯಾದಿ. | |
| | 5) 3 ಹೆಚ್.ಪಿ. ಓಪನ್‌ವೆಲ್ ಸಬ್‌ಮರ್ಸಿಬಲ್ ಪಂಪ್‌ಸೆಟ್ ವಿತ್ ಪ್ಯಾನಲ್ (ಟೆರಸ್ ಗಾರ್ಡನ್) | 1 ಸಂಖ್ಯೆ |
| 4) | **ಶೇಷಾದ್ರಿ ವಿಭಾಗ** | |
| | 1) ಬಾವಿ ನಂ.1–10 ಹೆಚ್‌ಪಿ ಬಿಕಾನ್ ಮೋನೋಬ್ಲಾಕ್ ಪಂಪ್‌ಸೆಟ್ (ಪ್ಯಾನಲ್ ಬೋರ್ಡ್). | 1 ಸಂಖ್ಯೆ |
| | 2) ಬಾವಿ ನಂ.2–5 ಹೆಚ್‌ಪಿ ಕ್ರಾಮ್‌ಟನ್ ಕಪಲ್ಡ್ ಪಂಪ್‌ಸೆಟ್ ಮತ್ತು ಪ್ಯಾನಲ್ ಬೋರ್ಡ್. | 1 ಸಂಖ್ಯೆ |
| | 3) ಬಾವಿ ನಂ.3–10 ಹೆಚ್‌ಪಿ ಕಿರ್ಲೋಸ್ಕರ್ ಕಪಲ್ಡ್ ಪಂಪ್‌ಸೆಟ್ ವಿತ್ ಪ್ಯಾನಲ್ ಬೋರ್ಡ್. | 1 ಸಂಖ್ಯೆ |
| | 4) ಬಾವಿ ನಂ.6–5 ಹೆಚ್‌ಪಿ ಕ್ರಾಂಪ್ಟನ್ ಕಪಲ್ಡ್ ಪಂಪ್‌ಸೆಟ್ ವಿತ್ ಸ್ಟಾರ್ಟರ್. | |
| | 5) ಬಾವಿ ನಂ.7, 5 ಹೆಚ್‌ಪಿ ಕ್ರಾಂಪ್ಟನ್ ಕಪಲ್ಡ್ ಪಂಪ್‌ಸೆಟ್ ವಿತ್ ಪ್ಯಾನಲ್ ಬೋರ್ಡ್. | 1 ಸಂಖ್ಯೆ<br>1 ಸಂಖ್ಯೆ |
| | 6) ಬೋರ್‌ವೆಲ್ ನಂ.1,2 ಮತ್ತು 3–6 ಹೆಚ್‌ಪಿ 17 ಸ್ಟೇಜ್ ಅಟ್ಲಾಂಟಾ ಸಬ್‌ಮರ್ಸಿಬಲ್ ಪಂಪ್‌ಸೆಟ್. | 3 ಸಂಖ್ಯೆ |
| | 7) 2 ಹೆಚ್‌ಪಿ ಲಾನ್‌ಮೂವರ್. | |
| | 8) 1 ಹೆಚ್.ಪಿ.ಸಿ.ಆರ್.ಐ. ಮೊನೋಬ್ಲಾಕ್ ಪಂಪ್‌ಸೆಟ್. | 1 ಸಂಖ್ಯೆ |
| | 9) ಸ್ಪಿಂಕಲರ್ಸ್, ಗೇಟ್‌ವಾಲ್ಸ್, ಪ್ಲಂಬಿಂಗ್ ವರ್ಕ್ ಇತ್ಯಾದಿ. | 1ಸಂಖ್ಯೆ<br>1 ಸಂಖ್ಯೆ |
| 5) | **ಮಕ್ಕಳ ಗ್ರಂಥಾಲಯ** | |
| | 1) 5 ಹೆಚ್‌ಪಿ ಪಂಪ್‌ಸೆಟ್ ವಿತ್ ಪ್ಯಾನೆಲ್ ಬೋರ್ಡ್ | 1 ಸಂಖ್ಯೆ |
| | 2) ಪೈಪ್‌ಲೈನ್ ಗೇಟ್‌ವಾಲ್ಸ್ ಇತ್ಯಾದಿ | |
| 6) | **ರೋಸ್ ಗಾರ್ಡನ್** | |
| | 1) 7.5 ಹೆಚ್‌ಪಿ ಕಿರ್ಲೋಸ್ಕರ್ ಮೋನೋಬ್ಲಾಕ್ ಪಂಪ್‌ಸೆಟ್ | 1 ಸಂಖ್ಯೆ |
| | 2) 7.5 ಹೆಚ್‌ಪಿ ಅಟ್ಲಾಂಟ ಸಬ್‌ಮರ್ಸಿಬಲ್ ಪಂಪ್‌ಸೆಟ್ ವಿತ್ ಪ್ಯಾನಲ್ ಬೋರ್ಡ್ (ಗ್ರಂಥಾಲಯದ ಬಳಿ, ವಿಧಾನಸೌಧ ನರ್ಸರಿಯವರು ಉಪಯೋಗಿಸಿರುತ್ತಾರೆ) | 1 ಸಂಖ್ಯೆ |
| | 3) ಪೈಪ್‌ಲೈನ್ ಗೇಟ್‌ವಾಲ್ಸ್,ಪಂಬಿಂಗ್ ವರ್ಕ ಇತ್ಯಾದಿ | 1 ಸಂಖ್ಯೆ |
| 7) | **ಗೋಪಾಲಗೌಡ ಕಾರಂಜಿ** | |
| | 1) 10 ಹೆಚ್‌ಪಿ ಸೋನ ಓಪನ್‌ವೆಲ್ ಸಬ್‌ಮರ್ಸಿಬಲ್ ಪಂಪ್‌ಸೆಟ್ ವಿತ್ ಪ್ಯಾನೆಲ್ ಬೋರ್ಡ್ | 1 ಸಂಖ್ಯೆ |
| | 2) 7.5 ಹೆಚ್‌ಪಿ ಸೋನ ಓಪನ್ ಸಬ್ ಮರ್ಸಿಬಲ್ ಪಂಪ್‌ಸೆಟ್ ವಿತ್ ಪ್ಯಾನೆಲ್ | 2 ಸಂಖ್ಯೆ |
| | 3) 20 ಹೆಚ್‌ಪಿ ಕ್ರಾಂಪ್ಟನ್ ಕಪಲ್ಡ್ ಮೋಟಾರ್ ವಿತ್ ಸ್ಟಾರ್ಟರ್ (ಸ್ಟೇಜ್ ಪಂಪ್) (ವಿಧಾನಸೌಧ ನರ್ಸರಿಯವರು ಉಪಯೋಗಿಸುತ್ತಿದ್ದಾರೆ) | 1 ಸಂಖ್ಯೆ |
| | 4) ಲೈಟ್ಸ್ (ಕಾರಂಜಿ) | 15 ಸಂಖ್ಯೆ |
| 8) | **ವಿಧಾನಸೌಧ ನರ್ಸರಿ** | |
| | 1) 15 ಹೆಚ್‌ಪಿ ಎ.ಇ.ಐ. ಕಪಲ್ಡ್ ಮೋಟಾರ್ ಪಂಪ್‌ಸೆಟ್ ವಿತ್ ಪ್ಯಾನಲ್ ಬೋರ್ಡ್ | 2 ಸಂಖ್ಯೆ |
| | 2) 3 ಹೆಚ್‌ಪಿ ಬಿಕಾನ್ ಮೋನೋಬ್ಲಾಕ್ ಪಂಪ್‌ಸೆಟ್ ವಿತ್ ಪ್ಯಾನೆಲ್ ಬೋರ್ಡ್ | 1 ಸಂಖ್ಯೆ |
| | 3) 15 ಹೆಚ್‌ಪಿ ಬಿಕಾನ್ ಮೋನೋಬ್ಲಾಕ್ ಪಂಪ್‌ಸೆಟ್ ವಿತ್ ಸ್ಟಾರ್ಟರ್ (ವಿಧಾನಸೌಧ ಪಂಪ ಹೌಸ್) | 1 ಸಂಖ್ಯೆ<br>] |
| | 4) 10 ಹೆಚ್‌ಪಿ ಬಿಕಾನ್ ಮೋನೋಬ್ಲಾಕ್ ಪಂಪ್‌ಸೆಟ್ (ವಿಧಾನಸೌಧ ಪಂಪ್‌ಸೆಟ್) | 1 ಸಂಖ್ಯೆ<br>2 ಸಂಖ್ಯೆ |
| | 5) 2 ಹೆಚ್‌ಪಿ ಲಾನ್‌ಮೂವರ್ ಮೋಟಾರ್ | 1 ಸಂಖ್ಯೆ |
| | 6) 1 ಹೆಚ್‌ಪಿ ಲಾನ್‌ಮೂವರ್ ಮೋಟಾರ್ | 1ಸಂಖ್ಯೆ |
| | 7) 2 ಹೆಚ್.ಪಿ.ಮೋನೋಬ್ಲಾಕ್ | 1ಸಂಖ್ಯೆ |
| | 8) 3 ಹೆಚ್.ಪಿ.ಸುಗುಣ ಮೋನೋಬ್ಲಾಕ್ ವಿತ್ ಪ್ಯಾನಲ್ ಬೋರ್ಡ್ | |
| | 9) ಸ್ಪಿಂಕಲರ್ಸ್,ಪೈಪ್‌ಲೈನ್, ಗೇಟ್‌ವಾಲ್ಸ್ ಇತ್ಯಾದಿ | |

| 1 | 2 | 3 |
|---|---|---|
| 9) | **ರಾಜಭವನ**<br>1) 5 ಹೆಚ್‌ಪಿ ಕೆ.ಎಸ್.ಬಿ. ಸಬ್‌ಮರ್ಸಿಬಲ್ ಪಂಪ್‌ಸೆಟ್ ವಿತ್ ಪ್ಯಾನಲ್‌ಬೋರ್ಡ<br>2) 5 ಹೆಚ್‌ಪಿ ಅಟ್ಲಾಂಟ ಸಬ್‌ಮರ್ಸಿಬಲ್ ಪಂಪ್‌ಸೆಟ್ ವಿತ್ ಪ್ಯಾನಲ್‌ಬೋರ್ಡ<br>3) 10 ಹೆಚ್‌ಪಿ ಕಿರ್ಲೋಸ್ಕರ್ ಕಪಲ್ಡ್ ಪಂಪ್‌ಸೆಟ್ ವಿತ್ ಪ್ಯಾನೆಲ್ ಬೋರ್ಡ್<br>4) 10 ಹೆಚ್‌ಪಿ ಎನ್.ಜಿ.ಇ.ಎಫ್. ಮೋನೋಬ್ಲಾಕ್ ಪಂಪ್ ಸೆಟ್ ವಿತ್ ಪ್ಯಾನೆಲ್ ಬೋರ್ಡ್<br>5) 1 ಹೆಚ್‌ಪಿ ಮೋನೋಬ್ಲಾಕ್ ಪಂಪ್‌ಸೆಟ್<br>6) 2 ಹೆಚ್‌ಪಿ ಲಾನ್ ಮೂವರ್<br>7) 1 ಹೆಚ್‌ಪಿ ಲಾನ್ ಮೂವರ್<br>8) ಪೈಪ್‌ಲೈನ್ಸ್, ಸ್ಪಿಂಕಲರ್ಸ್, ಪ್ಲಂಬಿಂಗ್ ವರ್ಕ್ ಇತ್ಯಾದಿ. | 1 ಸಂಖ್ಯೆ<br>1 ಸಂಖ್ಯೆ<br>2 ಸಂಖ್ಯೆ<br>2 ಸಂಖ್ಯೆ<br>1 ಸಂಖ್ಯೆ<br>1 ಸಂಖ್ಯೆ<br>2 ಸಂಖ್ಯೆ<br>2 ಸಂಖ್ಯೆ |
| 10) | **ಇಂದಿರಾಗಾಂಧಿ ಸಂಗೀತ ಕಾರಂಜಿ ವಿಭಾಗ**<br>1) 3 ಹೆಚ್‌ಪಿ ಕಂಪ್ರೆಸರ್ ವಿತ್ ಸ್ಟಾರ್ಟರ್ (ಬೋರ್‌ವೆಲ್)<br>2) 2 ಹೆಚ್‌ಪಿ ಟೆಕ್ಸ್‌ಮೊ ಮೋನೋಬ್ಲಾಕ್ ವಿತ್ ಸ್ಟಾರ್ಟರ್ಸ್<br>3) 1/2 ಹೆಚ್‌ಪಿ ಮೋನೋಬ್ಲಾಕ್<br>4) 2 ಹೆಚ್‌ಪಿ ಲಾನ್ ಮೂವರ್<br>5) 1 ಹೆಚ್‌ಪಿ ಲಾನ್ ಮೂವರ್<br>6) ಪೈಪ್‌ಲೈನ್ಸ್ ಗೇಟ್ ವಾಲ್ಸ್, ಪ್ಲಂಬಿಮಗ್ ವರ್ಕ್ ಇತ್ಯಾದಿ. | 4 ಸಂಖ್ಯೆ<br>2 ಸಂಖ್ಯೆ<br>1 ಸಂಖ್ಯೆ<br>1 ಸಂಖ್ಯೆ<br>1 ಸಂಖ್ಯೆ |
| 11) | **ಕುಮಾರಕೃಪಾ ವಿಭಾಗ**<br>1) 1 ಹೆಚ್‌ಪಿ ಲಾನ್‌ಮೂವರ್ಸ್<br>2) 2 ಹೆಚ್‌ಪಿ ಲಾನ್‌ಮೂವರ್<br>3) 2 ಹೆಚ್‌ಪಿ ಮೋನೋಬ್ಲಾಕ್<br>4) 1 ಹೆಚ್.ಪಿ.ಮೋನೋಬ್ಲಾಕ್ | 1 ಸಂಖ್ಯೆ<br>1 ಸಂಖ್ಯೆ<br>1 ಸಂಖ್ಯೆ<br>1 ಸಂಖ್ಯೆ |
| 12) | **ಬಾಲಬ್ರೂಯಿ ವಿಭಾಗ**<br>1) 2 ಹೆಚ್‌ಪಿ ಲಾನ್ ಮೂವರ್<br>2) 1 ಹೆಚ್.ಪಿ. ಲಾನ್‌ಮೂವರ್ಸ್<br>3) ಸ್ಟಾರ್ಟರ್ಸ್<br>4) ಪೈಪ್‌ಲೈನ್ಸ್ ಇತ್ಯಾದಿ. | 2 ಸಂಖ್ಯೆ<br>1 ಸಂಖ್ಯೆ<br>2 ಸಂಖ್ಯೆ |
| 14) | **ವಾಣಿ ವಿಲಾಸ್ ಗಾರ್ಡನ್**<br>1) 2 ಹೆಚ್‌ಪಿ ಲಾನ್ ಮೂವರ್ ಮೋಟಾರ್ ವಿತ್ ಸ್ಟಾರ್ಟರ್ | 1 ಸಂಖ್ಯೆ |

**ಗುತ್ತಿಗೆದಾರರಿಗೆ ಷರತ್ತುಗಳು ಹಾಗೂ ನಿಬಂಧನೆಗಳು:**

1. ನಿಗದಿತ ಟೆಂಡರ್ ಫಾರಂಗಳನ್ನು ದಿನಾಂಕ 29.7.2006 ರಿಂದ 2.8.2006 ರವರೆಗೆ ಈ ಕಛೇರಿಯಿಂದ ರೂ.500.00 ಪಾವತಿಸಿ ಪಡೆದುಕೊಳ್ಳಬಹುದು ಹಾಗೂ ಭರ್ತಿ ಮಾಡಿದ ಟೆಂಡರ್‌ಗಳನ್ನು ದಿನಾಂಕ 3.8.2006 ರಂದು ಸಂಜೆ 4.00 ಗಂಟೆಯೊಳಗೆ ಈ ಕಛೇರಿಗೆ ಸಲ್ಲಿಸಬೇಕು. ಹಾಗೂ ಬಂದಿರುವ ಟೆಂಡರ್‌ಗಳನ್ನು ಸ್ಥಳದಲ್ಲೇ ಹಾಜರಿರುವ ಟೆಂಡರ್‌ದಾರರ ಸಮ್ಮುಖದಲ್ಲಿ ಅದೇ ದಿನ ಸಂಜೆ 5.00 ಗಂಟೆಗೆ ತೆಗೆಯಲಾಗುವುದು.
2. ಟೆಂಡರ್ ಕರೆಯಲಾದ ಗುತ್ತಿಗೆ ಕೆಲಸಗಳನ್ನು ನಿರ್ವಹಿಸಲು ವಿದ್ಯುಚ್ಛಕ್ತಿ ಇಲಾಖೆಯಿಂದ ಪರವಾನಗಿ ಪಡೆದಿರುವ ಕ್ಲಾಸ್–1 ವಿದ್ಯುಚ್ಛಕ್ತಿ ಗುತ್ತಿಗೆದಾರರು ಮಾತ್ರ ಟೆಂಡರ್‌ಗಳನ್ನು ಮೇಲಿನ ಕೆಲಸಗಳಿಗೆ ಸಲ್ಲಿಸಲು ಅರ್ಹರಾಗಿರುತ್ತಾರೆ. ಹಾಗೂ ಟೆಂಡರ್‌ನ ಜೊತೆಗೆ ಕಾರ್ಮಿಕ ಇಲಾಖೆ ಅನುಮತಿ ಪತ್ರ, 2005–06 ನೇ ಸಾಲಿಗೆ ಆದಾಯ ತೆರಿಗೆ ದೃಢೀಕರಣ ಪತ್ರ ಸಲ್ಲಿಸಬೇಕು. 2004–05 ಹಾಗೂ 2005–06 ನೇ ಸಾಲಿನಲ್ಲಿ ಪ್ರತಿಷ್ಠಿತ ಸಂಸ್ಥೆಗಳಲ್ಲಿ/ಇಲಾಖೆಗಳಲ್ಲಿ ವಿದ್ಯುಚ್ಛಕ್ತಿ ಕೆಲಸ ನಿರ್ವಹಿಸಿರುವುದರಿಂದ ಅನುಭವ ದೃಢೀಕರಣ ಪತ್ರ ಲಗತ್ತಿಸಬೇಕು.
3. ಟೆಂಡರ್‌ಅನ್ನು ಸಲ್ಲಿಸುವಾಗ ಇ.ಎಂ.ಡಿ. ಹಣ ರೂ.25000.00 ಗಳಿಗೆ ಬ್ಯಾಂಕ್ ಡ್ರಾಫ್ಟ್‌ಗಳನ್ನು ಯಾವುದಾದರೂ ರಾಷ್ಟ್ರೀಕೃತ ಬ್ಯಾಂಕಿನಿಂದ ಸದಸ್ಯ ಕಾರ್ಯದರ್ಶಿಗಳು, ಬೆಂಗಳೂರು ಗಾರ್ಡನ್ ಟ್ರೆಸ್ಟ್, ಲಾಲ್‌ಬಾಗ್, ಬೆಂಗಳೂರು, ಇವರಿಗೆ ಪಾವತಿಯಾಗುವಂತೆ ಪಡೆದು ಲಗತ್ತಿಸಿರಬೇಕು. ಹಾಗೂ ಟೆಂಡರ್ ತೆಗೆಯುವ ಮೊದಲು ಬ್ಯಾಂಕ್ ಡ್ರಾಫ್ಟ್‌ನ ಜೆರಾಕ್ಸ್ ಪ್ರತಿಯನ್ನು ತೋರಿಸಬೇಕು.
4. ಯಶಸ್ವಿ ಗುತ್ತಿಗೆದಾರರ ಠೇವಣಿ ಹಣವನ್ನು ಬಿಟ್ಟು ಮಿಕ್ಕ ಎಲ್ಲಾ ಟೆಂಡರ್‌ದಾರರ ಠೇವಣಿ ಹಣವನ್ನು ಟೆಂಡರ್ ಕರೆಯಲಾದ ದಿನವೇ ಹಿಂದಿರುಗಿಸಲಾಗುತ್ತದೆ. ಯಶಸ್ವಿ ಗುತ್ತಿಗೆದಾರರ ಠೇವಣಿ ಹಣವನ್ನು ಮಾತ್ರ ಗುತ್ತಿಗೆ ಅವಧಿ ಮುಗಿದ ಮೇಲೆ ಸಂಬಂಧಿಸಿದ ಶಾಖಾಧಿಕಾರಿಗಳ ತೃಪ್ತಿಕರ ನಿರ್ವಹಣೆಯ ದೃಢೀಕರಣ ಪತ್ರ ಪಡೆದ ನಂತರ ಹಿಂದಿರುಗಿಸಲಾಗುತ್ತದೆ.
5. ಯಶಸ್ವಿ ಗುತ್ತಿಗೆದಾರರು ಗುತ್ತಿಗೆ ಕೆಲಸವನ್ನು ನಿರ್ವಹಿಸುವ ಮೊದಲು ಟೆಂಡರ್ ಷರತ್ತುಗಳಿಗೆ ಹಾಗೂ ನಿಬಂಧನೆಗಳಿಗೆ ಪೂರ್ಣವಾಗಿ ಬದ್ಧರಾಗಿರುತ್ತೇನೆ ಎಂದು ರೂ.200.00 ಗಳ ಛಾಪಾ ಕಾಗದದ ಮೇಲೆ ಕರಾರನ್ನು ಬರೆದು ನೋಟರಿ ಮಾಡಿಸಿ ಈ ಕಛೇರಿಗೆ ಸಲ್ಲಿಸಬೇಕು.
6. ಈ ಕಛೇರಿಯಿಂದ ನೀಡಲಾದ ನಿಗಧಿತ ಟೆಂಡರ್ ನಮೂನೆಯಲ್ಲಿ ಸಲ್ಲಿಸಿದ ಟೆಂಡರ್‌ಗಳನ್ನು ಮಾತ್ರ ಅಂಗೀಕರಿಸಲಾಗುವುದು ಹಾಗೂ ಅವಧಿ ಮೀರಿದ ಟೆಂಡರ್‌ಗಳನ್ನು ಪರಿಗಣಿಸಲಾಗುವುದಿಲ್ಲ.

7. ಗುತ್ತಿಗೆ ಕೆಲಸಕ್ಕೆ ಪ್ರತಿ ಮಾಹೆಯಲ್ಲಿ ಒಂದು ಬಾರಿ ತೃಪ್ತಿಕರ ನಿರ್ವಹಣೆಯ ದೃಢೀಕರಣ ಸಂಬಂದಿಸಿದ ಅಧಿಕಾರಿಗಳ ದೃಢೀಕರಣ ಪಡೆದ ನಂತರ ಹಣ ಪಾವತಿಸಲು ಕ್ರಮ ಕೈಗೊಳ್ಳಲಾಗುತ್ತದೆ. ಹಣ ಪಾವತಿಸುವಾಗ ನಿಯಮದಂತೆ ಅನ್ವಯವಾಗುವ ತೆರಿಗೆಗಳನ್ನು ಬಿಲ್ಲಿನ ಮೂಲದಲ್ಲಿ ಕಡಿತಗೊಳಿಸಲಾಗುವುದು ಠೇವಣಿ ಹಣಕ್ಕೆ ಯಾವುದೇ ಬಡ್ಡಿ ನೀಡುವುದಿಲ್ಲ ಹಾಗೂ ಈ ಸಂಬಂಧ ಇಲಾಖೆಗೆ ನೀಡಿದ ಬ್ಯಾಂಕ್ ಡ್ರಾಫ್ಟನ್ನು ಆರು ತಿಂಗಳ ನಂತರ ಅವಧಿಯಲ್ಲಿ ಗುತ್ತಿಗೆದಾರರ ಖರ್ಚಿನಿಂದ ನವೀಕರಣ ಮಾಡಿಸಿಕೊಡಬೇಕು.
8. ಪಾಲುದಾರ ಸಂಸ್ಥೆಯಿಂದ ಟೆಂಡರ್ ಸಲ್ಲಿಸಿದ್ದಲ್ಲಿ ಪಾಲುದಾರಿಕೆ ಬಗ್ಗೆ ಟೆಂಡರ್ ಸಲ್ಲಿಸುವ ಮೊದಲೇ ನೊಂದಾಣಿ ಮಾಡಿಸಿರುವ ಪ್ರತಿ ಲಗತ್ತಿಸಿರಬೇಕು.
9. ಗುತ್ತಿಗೆ ಕೆಲಸವನ್ನು ಸರಿಯಾಗಿ ನಿರ್ವಹಿಸದಿದ್ದ ಪಕ್ಷದಲ್ಲಿ ಮೊದಲ ಬಾರಿಗೆ ಶೇ.10 ಎರಡನೇ ಬಾರಿಗೆ ಶೇ.20 ಹಾಗೂ ಮೂರನೇ ಬಾರಿಗೆ ಶೇ.30 ಒಟ್ಟು ಅನುಮೋದಿತ ವೆಚ್ಚದ ದಂಡನೆಯನ್ನು ವಿಧಿಸಲಾಗುವುದು. (ಸದರಿ ಮೊಬಲಗನ್ನು ತೋಟಗಾರಿಕೆ ಉಪ ನಿರ್ದೇಶಕರವರು ನಿರ್ಧರಿಸಿಕೊಳ್ಳುವುದು) ಇಷ್ಟಾಗಿಯೂ ಕೆಲಸ ಸಮರ್ಪಕವಾಗಿಲ್ಲದಿದ್ದಲ್ಲಿ ಗುತ್ತಿಗೆಯನ್ನು ರದ್ದುಪಡಿಸಿ ಠೇವಣಿಯನ್ನು ಮುಟ್ಟುಗೋಲು ಹಾಕಿಕೊಳ್ಳಲಾಗುವುದು ಹಾಗೂ ಅಂತಹ ಸಂಸ್ಥೆ/ ವ್ಯಕ್ತಿಯನ್ನು ಕಪ್ಪುಪಟ್ಟಿಗೆ ಸೇರಿಸಲು ಕ್ರಮ ವಹಿಸಲಾಗುವುದು.
10. ವಾರ್ಷಿಕ ಗುತ್ತಿಗೆ ಅವಧಿಯಲ್ಲಿ ನಿರ್ವಹಿಸಬೇಕಾದ ಕೆಲಸ ಕಾರ್ಯಗಳನ್ನು ತೃಪ್ತಿಕರವಾಗಿ ಹಾಗೂ ಸಮರ್ಪಕವಾಗಿ ನಿರ್ವಹಿಸದೇ ಇದ್ದಲ್ಲಿ ಯಾವುದೇ ಕಾರಣ ನೀಡದೇ ಗುತ್ತಿಗೆದಾರರನ್ನು ರದ್ದುಪಡಿಸುವ ಹಕ್ಕನ್ನು ತೋಟಗಾರಿಕೆ ನಿರ್ದೇಶಕರು, ಲಾಲ್‌ಬಾಗ್, ಬೆಂಗಳೂರು ರವರಲ್ಲಿ ಕಾಯ್ದಿರಿಸಲಾಗಿದೆ.

ಈ ಮೇಲಿನ ಯಾವುದೇ ಷರತ್ತುಗಳನ್ನು ಪೂರೈಸದ ಟೆಂಡರ್‌ಗಳನ್ನು ಕಾರಣ ನೀಡದೆ ತಿರಸ್ಕರಿಸುವ ಹಕ್ಕನ್ನು ತೋಟಗಾರಿಕೆ ನಿರ್ದೇಶಕರು, ಲಾಲ್‌ಬಾಗ್, ಬೆಂಗಳೂರು ರವರು ಹೊಂದಿರುತ್ತಾರೆ.

ಹೆಚ್ಚಿನ ವಿವರಗಳನ್ನು ತೋಟಗಾರಿಕೆ ಉಪ ನಿರ್ದೇಶಕರು, ಕಬ್ಬನ್ ಉದ್ಯಾನವನ, ಬೆಂಗಳೂರು, ಇವರ ಕಛೇರಿಯಲ್ಲಿ ಸಂಪರ್ಕಿಸಿ ಪಡೆಯಬಹುದು.

ತೋಟಗಾರಿಕೆ ಉಪ ನಿರ್ದೇಶಕರು,
ಕಬ್ಬನ್ ಉದ್ಯಾನವನ, ಬೆಂಗಳೂರು-1.

ಪಿ.ಆರ್.385

## ಭದ್ರಾವತಿ ಅರಣ್ಯ ವಿಭಾಗ
## ಉಪ ಅರಣ್ಯ ಸಂರಕ್ಷಣಾಧಿಕಾರಿ, ಭದ್ರಾವತಿ ವಿಭಾಗ, ಭದ್ರಾವತಿ
## ಸಂಕ್ಷಿಪ್ತ ಮರು ಟೆಂಡರ್ ಪ್ರಕಟಣೆ
### ಸಂಖ್ಯೆ: ಎ2-ಬಿಯುಡಿ-ಸಿಆರ್-05/ 06-07, ದಿನಾಂಕ:26ನೇ ಜೂನ್, 2006

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ 2007ನೇ ಸಾಲಿನ ಮಳೆಗಾಲದಲ್ಲಿ ಉಪ ಅರಣ್ಯ ಸಂರಕ್ಷಣಾಧಿಕಾರಿ ಭದ್ರಾವತಿ ವಿಭಾಗದ ವ್ಯಾಪ್ತಿಯಲ್ಲಿ ಬರುವ ಈ ಕೆಳಕಂಡ ಅರಣ್ಯ ಪ್ರದೇಶಗಳಲ್ಲಿ ನೆಡುತೋಪು ರಚನೆ ಮಾಡಲು ಮುಂಗಡ ರಿಪ್ಪಿಂಗ್ ಕಾಮಗಾರಿ, ಜಾನುವಾರು ನಿರೋಧಕ ಕಂದಕ ಮತ್ತು ಗುಂಡಿ ತೆಗೆಯುವುದು ಹಾಗೂ ಸಸಿ ಬೆಳೆಸಲು ಕೊಟ್ಟಿಗೆ ಗೊಬ್ಬರ, ಮರಳು ಮತ್ತು ಕೆಂಪು ಮಣ್ಣು ಸರಬರಾಜು ಮಾಡುವ ಕಾಮಗಾರಿಗಳನ್ನು ನಿರ್ವಹಿಸಲು ನೋಂದಾಯಿತ ಅರಣ್ಯ ಗುತ್ತಿಗೆದಾರರಿಂದ ಟೆಂಡರ್ ಕರೆಯಲಾಗಿದೆ. ಆಸಕ್ತ ಅರಣ್ಯ ಗುತ್ತಿಗೆದಾರರು **ದಿನಾಂಕ:20.07.2006ರ ಅಪರಾಹ್ನ 3.00** ಗಂಟೆಯೊಳಗೆ ಮೊಹರು ಮಾಡಿದ ಲಕೋಟೆಯಲ್ಲಿ ಟೆಂಡರ್‌ನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿ ಭದ್ರಾವತಿ ಅರಣ್ಯ ವಿಭಾಗ, ಭದ್ರಾವತಿ ಇವರಿಗೆ ಸಲ್ಲಿಸಲು ಕೋರಿದೆ ಟೆಂಡರ್‌ದಾರರ ಸಮಕ್ಷಮದಲ್ಲಿ ಟೆಂಡರ್ ಲಕೋಟೆಯನ್ನು ಅಪರಾಹ್ನ 4.00 ಗಂಟೆಗೆ ತೆರೆಯಲಾಗುವುದು.

| ಕ್ರ. ಸಂ. | ಯೋಜನೆ ಹೆಸರು | ಮಾದರಿ | ವಲಯದ ಹೆಸರು | ಕಾಮಗಾರಿ ಪ್ರದೇಶದ ಹೆಸರು | ಸರ್ವೆ ನಂ. | ಪ್ರದೇಶ | ಅಂದಾಜು ಮೊತ್ತ | ಠೇವಣಿ |
|---|---|---|---|---|---|---|---|---|
| 1 | 2 | 3 | 4 | 5 | 6 | 7 | 8 | 9 |
| **ನೆಡುತೋಪು ರಚನೆ** | | | | | | | | |
| 1. | 12ನೇ ಆರ್ಥಿಕ ಆಯೋಗ | ಉರುವಲು | ಚನ್ನಗಿರಿ | ದಿಗ್ಗೇನಹಳ್ಳಿ | 84, 85 | 25 ಹೆ. | 328000/- | 6600/- |
| | | | ಅಜ್ಜಂಪುರ | ಚೀರನಹಳ್ಳಿ | 50 | 25 ಹೆ. | 328000/- | 6600/- |
| | | | ಭದ್ರಾವತಿ | ಗುಡ್ಡದಹಳ್ಳಿ | | 25 ಹೆ. | 223000/- | 4500/- |
| | | | ಚನ್ನಗಿರಿ | ಕಲ್‌ಕೆರೆ | 20 | 20 ಹೆ. | 26500/- | 5300/- |
| | | ಗ್ಯಾಪ್ ಪ್ಲಾಂಟಿಂಗ್ | ತರೀಕೆರೆ | ಗಂಗೂರು | 56, 51 | 25 ಹೆ. | 55000/- | 1100/- |
| | | | ಉಂಬ್ಳೇಬೈಲು | ಉಂಬ್ಳೇಬೈಲು | | 25 ಹೆ. | 55000/- | 1100/- |
| 2. | ಕ್ಷೀಣಿತ ಅರಣ್ಯ ಕೆ.ಎಸ್.ಎಂ.ಬಿ.ಸಿ. | - | ಚನ್ನಗಿರಿ | ದಿಗ್ಗೇನಹಳ್ಳಿ | 85 | 20 ಹೆ. | 176000/- | 3500/- |
| | | | | | | | | |
| 3. | ಕೆ.ಎಸ್.ಎಂ.ಬಿ.ಸಿ. | 4 | ಉಂಬ್ಳೇಬೈಲು | ಎಡೇಹಳ್ಳಿ | 20 | 40 | 348000/- | 7000/- |
| | | | | ಹಾಲ್‌ಲಕ್ಕವಳ್ಳಿ | | | | |

| 1 | 2 | 3 | 4 | 5 | 6 | 7 | 8 | 9 |
|---|---|---|---|---|---|---|---|---|
| | | | ತರೀಕೆರೆ | ತ್ಯಾಗದಬಾಗಿ ಅತ್ತಿಗನಾಳು | 120 | 62 ಹೆ. | 564200/- | 11300/- |
| | | | | ಕೆಂಚೀನಹಳ್ಳಿ | 37 | 30 ಹೆ. | 273000/- | 5500/- |
| | | | ಲಕ್ಕವಳ್ಳಿ | ಕರಕುಚ್ಚಿ | 75, 76 | 20 ಹೆ. | 174000/- | 14700/- |
| | | | ಅಜ್ಜಂಪುರ | ಚೀರನಹಳ್ಳಿ ಭಾಗ 1,2,3,4 | 120 | 81 ಹೆ. | 737100/- | 14700/- |
| | | | ಚನ್ನಗಿರಿ | ಕೆ. ಹೊಸಹಳ್ಳಿ | 15 | 30 ಹೆ. | 273000/- | 5500/- |
| | | | | ಕಲ್‌ಕೆರೆ ಭಾಗ 1,2 | 24, 25 | 50 ಹೆ. | 455000/- | 9100/- |
| | | | ಶಾಂತಿಸಾಗರ | ಮಾಡಾಳ್ ಭಾಗ 1, 2 | 38 | 40 ಹೆ. | 364000/- | 7200/- |
| | | | | **ಒಟ್ಟು** | | **353 ಹೆ.** | | |
| **ಮಾನ್‌ಸೂನ್ ನೆಡುತೋಪು ರಚನೆ** | | | | | | | | |
| 4. | ಕೆ.ಎಸ್.ಎಫ್.ಎಂ.ಬಿ.ಸಿ. | 1 | ಅಜ್ಜಂಪುರ | ಹಣ್ಣೆ | 1 | 75 ಹೆ. | 466125/- | 9300/- |
| | | | ಚನ್ನಗಿರಿ | ಕೆ.ಯು. ಎಸ್.ಎಫ್. ಬಂಡಿಗುಡ್ಡ | 1 | 75 ಹೆ. | 466125/- | 9300/- |
| | | | | **ಒಟ್ಟು** | | **150 ಹೆ.** | | |
| **ಮುಂಗಡ ಗುಂಡಿ ಕಾಮಗಾರಿ** | | | | | | | | |
| 5. | ಕೆ.ಎಸ್.ಎಫ್.ಎಂ.ಬಿ.ಸಿ. | | ಚನ್ನಗಿರಿ | ಉಬ್ರಾಣಿ | 23 | 50 ಹೆ. | 690900/- | 13800/- |
| | | | ತರೀಕೆರೆ | ತ್ಯಾಗದಬಾಗಿ | 60, 61 | 50 ಹೆ. | 690900/- | 13800/- |
| | | | ಶಾಂತಿಸಾಗರ | ಭದ್ರಾಪುರ | 35 | 50 ಹೆ. | 690900/- | 13800/- |
| | | | | **ಒಟ್ಟು** | | **150 ಹೆ.** | | |
| **ಮುಂಗಡ ಗುಂಡಿ ಕಾಮಗಾರಿ** | | | | | | | | |
| 6. | ಕೆ.ಎಸ್.ಎಫ್.ಎಂ.ಬಿ.ಸಿ. | 3 | ಚನ್ನಗಿರಿ | ಬೀಡಗೊಂಡನ ಹಳ್ಳಿ | 6,9 | 25 ಹೆ. | 400000/- | 8000/- |
| | | | | ಪೆನ್ನಸಮುದ್ರ | 43,44 | 26 ಹೆ. | 400000/- | 8000/- |
| | | | ಭದ್ರಾವತಿ | ದೇವರಹಳ್ಳಿ | 55 | 25 ಹೆ. | 400000/- | 8000/- |
| | | | | ವರವಿನಕೆರೆ | 3 | 25 ಹೆ. | 400000/- | 8000/- |
| | | | ಉಂಬ್ಳೇಬೈಲು | ಹುಣಸೇಕಟ್ಟೆ | 14 | 25 ಹೆ. | 400000/- | 8000/- |
| | | | ತರೀಕೆರೆ | ತ್ಯಾಗದಬಾಗಿ | 60, 61 | 25 ಹೆ. | 400000/- | 8000/- |
| | | | | ನಂದಿಬಟ್ಲು | 70, 72 | 25 ಹೆ. | 400000/- | 8000/- |
| | | | ಶಾಂತಿಸಾಗರ | ಭದ್ರಾಪುತ | 29, 33 | 25 ಹೆ. | 400000/- | 8000/- |
| | | | | **ಒಟ್ಟು** | | **200 ಹೆ.** | | |
| **ಮುಂಗಡ ರಿಪ್ಪಿಂಗ್ ಕಾಮಗಾರಿ** | | | | | | | | |
| 7. | ಕೆ.ಎಸ್.ಎಫ್.ಎಂ.ಬಿ.ಸಿ. | 4 | ಚನ್ನಗಿರಿ | ತುಪ್ಪದಹಳ್ಳಿ | 17 | 50 ಹೆ. | 531750/- | 10600/- |
| | | | ಭದ್ರಾವತಿ (ರಿಪ್ಪಿಂಗ್) | ಕೂಡ್ಲಿಗೆರೆ | 67 | 50 ಹೆ. | 531750/- | 10600/- |
| | | | ಶಾಂತಿಸಾಗರ | ಭದ್ರಾಪುರ | 22 | 50 ಹೆ. | 531750/- | 10600/- |
| | | | ತರೀಕೆರೆ | ಅತ್ತಿಗನಾಳು | 120 | 50 ಹೆ. | 531750/- | 10600/- |
| | | | ಅಜ್ಜಂಪುರ | ಗಡಿರಂಗಾಪುರ | 1 | 50 ಹೆ. | 531750/- | 10600/- |
| | | | | **ಒಟ್ಟು** | | **250 ಹೆ.** | | |
| **ಮುಂಗಡ ಗುಂಡಿ ಕಾಮಗಾರಿ** | | | | | | | | |
| 8. | ಕೆ.ಎಸ್.ಎಫ್.ಎಂ.ಬಿ.ಸಿ. | 5 | ಚನ್ನಗಿರಿ | ಕಲ್‌ಕೆರೆ | 57 | 25 ಹೆ. | 198425/- | 4000/- |
| | | | | ಪೆನ್ನಸಮುದ್ರ | 43,44 | 25 ಹೆ. | 198425/- | 4000/- |
| | | | ಭದ್ರಾವತಿ | ಕೂಡ್ಲಿಗೆರೆ | 67 | 25 ಹೆ. | 198425/- | 4000/- |
| | | | ಶಾಂತಿಸಾಗರ | ಮಲ್ಲಿಗೇನಹಳ್ಳಿ | 27 | 25 ಹೆ. | 198425/- | 4000/- |
| | | | ತರೀಕೆರೆ | ನಂದಿಬಟ್ಲು | 76, 72 | 25 ಹೆ. | 198425/- | 4000/- |

| 1 | 2 | 3 | 4 | 5 | 6 | 7 | 8 | 9 |
|---|---|---|---|---|---|---|---|---|
| | | | ಉಂಬ್ಳೇಬೈಲು | ಹಾಗಲಮನೆ | 35 | 25 ಹೆ. | 198425/- | 4000/- |
| | | | ಅಜ್ಜಂಪುರ | ಹಣ್ಣೆ | 1 | 25 ಹೆ. | 198425/- | 4000/- |
| | | | ಲಕ್ಕವಳ್ಳಿ | ಕರಕುಚ್ಚಿ | 75, 76 | 25 ಹೆ. | 198425/- | 4000/- |
| | | | | **ಒಟ್ಟು** | | **200 ಹೆ.** | | |
| 9. | 12ನೇ ಆರ್ಥಿಕ ಆಯೋಗ | ಉರುವಲು | ಚನ್ನಗಿರಿ (ರಿಪ್ಪಿಂಗ್) | ಪೆನ್ನಸಮುದ್ರ | 43, 44 | 20 ಹೆ. | 273000/- | 5400/- |
| | | | ಲಕ್ಕವಳ್ಳಿ (ಗುಂಡಿ) | ಗುರುಪುರ | 8 | 20 ಹೆ. | 273000/- | 5400/- |
| | | | ಶಾಂತಿಸಾಗರ (ರಿಪ್ಪಿಂಗ್) | ಸಾರಥಿ | 62 | 20 ಹೆ. | 273000/- | 5400/- |
| | | | | **ಒಟ್ಟು** | | **60 ಹೆ.** | | |
| **ಸಸ್ಯಕ್ಷೇತ್ರಗಳಲ್ಲಿ ಸಸಿಬೆಳೆಸುವಿಕೆ (ಮಿಶ್ರಣ ಸರಬರಾಜು ಸೇರಿ)** | | | | | | | **(ಸಂಖ್ಯೆಗಳಲ್ಲಿ)** | |
| 10. | ಕೆ.ಎಸ್.ಎಫ್.ಎಂ.ಬಿ.ಸಿ. | - | ಚನ್ನಗಿರಿ | ಮಾವಿನಹೊಳೆ ಸಸ್ಯಕ್ಷೇತ್ರ | 5*8 | 90000 | 132500/- | 2600/- |
| | | | | | 8*12 | 78000 | 331500/- | 6600/- |
| | | | | | 14*20 | 5500 | 91025/- | 1800/- |
| | | | ತರೀಕೆರೆ | ಬಾವಿಕೆರೆ ಸಸ್ಯಕ್ಷೇತ್ರ | 5*8 | 90000 | 132500/- | 2600/- |
| | | | | | 8*12 | 78000 | 331500/- | 6600/- |
| | | | | | 14*20 | 2750 | 45400/- | 900/- |
| | | | ಶಾಂತಿಸಾಗರ | ಮಾವಿನಕಟ್ಟೆ ಸಸ್ಯಕ್ಷೇತ್ರ | 5*8 | 90000 | 132500/- | 2600/- |
| | | | | | 8*12 | 54000 | 229500/- | 4600/- |
| | | | | | 14*20 | 2750 | 45400/- | 900/- |
| | | | ಭದ್ರಾವತಿ | ಕೂರ್ಲಕೊಪ್ಪ ಸಸ್ಯಕ್ಷೇತ್ರ | 5*8 | 90000 | 132500/- | 2600/- |
| | | | | | 8*12 | 54000 | 229500/- | 4600/- |
| | | | | | 14*20 | 2750 | 45400/- | 900/- |
| | | | ಉಂಬ್ಳೇಬೈಲು | ಕಾಕನಹೊಸೂಡಿ ಸಸ್ಯಕ್ಷೇತ್ರ | 8*12 | 24000 | 102000/- | 2000/- |
| | | | | | 14*20 | 2750 | 45400/- | 900/- |
| | | | ಅಜ್ಜಂಪುರ | ಪರ್ವತರಾಯನ ಕೆರೆ ಸಸ್ಯಕ್ಷೇತ್ರ | 5*8 | 90000 | 132500/- | 2600/- |
| | | | | | 8*12 | 6000 | 25500/- | 500/- |
| | | | | | 14*20 | 2750 | 45400/- | 900/- |
| | | | ಲಕ್ಕವಳ್ಳಿ | ಲಕ್ಕವಳ್ಳಿ ಸಸ್ಯಕ್ಷೇತ್ರ | 14*20 | 2750 | 45400/- | 900/- |
| **ಸಸಿ ಬೆಳಸುವಿಕೆ** | | | | | | | | |
| 11. | 12ನೇ ಆರ್ಥಿಕ ಆಯೋಗ | | ಚನ್ನಗಿರಿ | ಮಾವಿನಹೊಳೆ | 5*8 | 36000 | 55600/- | 1100/- |
| | | | | | 8*12 | 2400 | 11400/- | 200/- |
| | | | ಶಾಂತಿಸಾಗರ | ಮಾವಿನಕಟ್ಟೆ | 5*8 | 36000 | 56600/- | 1100/- |
| | | | | | 8*12 | 2400 | 11400/- | 200/- |
| | | | ಲಕ್ಕವಳ್ಳಿ | ಲಕ್ಕವಳ್ಳಿ | 5*8 | 36000 | 56600/- | 1100/- |
| | | | | | 8*12 | 2400 | 11400/- | 200/- |
| | | | | **ಒಟ್ಟು** | **5*8** | **108000** | | |
| | | | | | **8*12** | **7200** | | |
| 12. | ಕ್ಷೀಣಿತ ಅರಣ್ಯ | | ಲಕ್ಕವಳ್ಳಿ | ಲಕ್ಕವಳ್ಳಿ | 5*8 | 36000 | 56600/- | 1100/- |
| **ಮುಂಗಡ ಗುಂಡಿ ಕಾಮಗಾರಿ** | | | | | | | | |
| 13. | ಕ್ಷೀಣಿತ ಅರಣ್ಯ | | ಲಕ್ಕವಳ್ಳಿ | ಶಾಂತಿಪುರ | 67 | 20 ಹೆ. | 56600/- | 1100/- |

ನಿಬಂಧನೆಗಳು:

1. ಭದ್ರಾವತಿ ಅರಣ್ಯ ವಿಭಾಗದಲ್ಲಿ ನೊಂದಾಯಿತ ಅರಣ್ಯ ಗುತ್ತಿಗೆದಾರರು ಮಾತ್ರ ಟೆಂಡರ್‌ನಲ್ಲಿ ಭಾಗವಹಿಸುವುದು. 12-00 ರೂ ಪಾವತಿಸಿ ಟೆಂಡರ್ ಫಾರಂನ್ನು ದಿನಾಂಕ: 20.07.2006 ರಂದು 1.30 ಗಂಟೆಯೊಳಗೆ ಈ ಕಛೇರಿಯಿಂದ ಪಡೆಯಬಹುದು. ದರವನ್ನು ಮಂಜೂರಾದ ಅನುಸೂಚಿ ದರದ ಮೇಲೆ ಶೇಕಡಾ ಇಂತಿಷ್ಟು ಹೆಚ್ಚು ಅಥವಾ ಕಡಿಮೆ ಎಂಬುದನ್ನು ನಮೂದಿಸಬೇಕು.
2. **ಕಾಲಾವಧಿ:** (1) ನೆಡುತೋಪುಗಳಲ್ಲಿ ಗಿಡನೆಡುವ ಕಾರ್ಯವನ್ನು 31.07.2006 ಹಾಗೂ ಇತರೆ ನಿರ್ವಹಣೆ ಕಾಮಗಾರಿಯನ್ನು ಹವಾಗುಣಕ್ಕನುಗುಣವಾಗಿ ಮತ್ತು ವಲಯ ಅರಣ್ಯಾಧಿಕಾರಿಗಳ ಸೂಚನೆಗೆ ಅನುಸಾರವಾಗಿ 31.03.2007 ರವರೆಗೆ ನಿರ್ವಹಿಸಬೇಕು. (2) ಮುಂಗಡ ರಿಪ್ಪಿಂಗ್ ಮತ್ತು ಗುಂಡಿ ತೋಡುವ ಕಾಮಗಾರಿಗಳನ್ನು ಸೆಪ್ಟೆಂಬರ್ 15ರ ನಂತರ 30.11.2006ರೊಳಗೆ ನಿರ್ವಹಿಸಬೇಕು. (3) ಸಸ್ಯಕ್ಷೇತ್ರಕ್ಕೆ ಗೊಬ್ಬರ, ಮರಳು ಮತ್ತು ಮಣ್ಣನ್ನು 31.07.2006 ರೊಳಗೆ ಸರಬರಾಜು ಮಾಡುವುದು. ಇತರೆ ಕಾಮಗಾರಿಗಳನ್ನು 31.03.2007 ರವರೆಗೆ ನಿರ್ವಹಿಸಬೇಕು.
3. ಇತರೆ ನಿಬಂಧನೆಗಳನ್ನು ವಿಭಾಗ ಕಛೇರಿಯಿಂದ ಪಡೆಯಬಹುದು.

ಎಸ್. ವೆಂಕಟೇಸನ್

ಪಿ.ಆರ್.387

ಉಪ ಅರಣ್ಯ ಸಂರಕ್ಷಣಾಧಿಕಾರಿ,
ಭದ್ರಾವತಿ ವಿಭಾಗ, ಭದ್ರಾವತಿ.

## ಜಿಲ್ಲಾ ಪೊಲೀಸ್ ಕಛೇರಿ, ಹಾಸನ ಜಿಲ್ಲೆ, ಹಾಸನ

## ಅಧಿಸೂಚನೆ

### ಸಂಖ್ಯೆ: ಪಿಎಂಟಿ:110/ 02-03, ದಿನಾಂಕ: 1ನೇ ಜುಲೈ, 2006

**ವಿಷಯ:** ಹಾಸನ ಜಿಲ್ಲಾ ಪೊಲೀಸ್ ಇಲಾಖೆಯ ಅನುಪಯುಕ್ತ ಪೊಲೀಸ್ ವಾಹನಗಳನ್ನು ಟೆಂಡರ್ ಮೂಲಕ ಸಾರ್ವಜನಿಕ ಹರಾಜು ಮಾಡಿ ವಿಲೇವಾರಿ ಮಾಡುವ ಬಗ್ಗೆ.

**ಉಲ್ಲೇಖ:** ಪೊಲೀಸ್ ಪ್ರಧಾನ ಕಛೇರಿಯ ಆದೇಶ ಸಂಖ್ಯೆ: ವಾ.ಸಾ(1) 11/ 06-07, ದಿನಾಂಕ:30.05.2006.

ಈ ಮೂಲಕ ಸಾರ್ವಜನಿಕ ಗಮನಕ್ಕೆ ತಿಳಿಯಪಡಿಸುವುದೇನೆಂದರೆ, ದಿನಾಂಕ:17.08.2006ರಂದು ಬೆಳಿಗ್ಗೆ 11.00 ಗಂಟೆಗೆ ಸರಿಯಾಗಿ ಜಿಲ್ಲಾ ಸಶಸ್ತ್ರ ಮೀಸಲು ಪಡೆಯ ಕೇಂದ್ರಸ್ಥಾನ ಹೊಸಲೈನ್ ರಸ್ತೆ ಹಾಸನದಲ್ಲಿ, ಹಾಸನ ಜಿಲ್ಲಾ ಪೊಲೀಸ್ ಇಲಾಖೆಯ ಕೆಳಕಂಡ ಅನುಪಯುಕ್ತ ವಾಹನಗಳ ಟೆಂಡರ್ ಕಂ. ಬಹಿರಂಗ ಹರಾಜು ಮೂಲಕ ವಿಲೇವಾರಿಗೊಳಿಸಲಾಗುವುದು. ಸದರಿ ಅನುಪಯುಕ್ತ ವಾಹನಗಳನ್ನು ಜಿಲ್ಲಾ ಸಶಸ್ತ್ರ ಮೀಸಲು ಪಡೆಯ ಕೇಂದ್ರಸ್ಥಾನ ಹೊಸಲೈನ್‌ರಸ್ತೆಯಲ್ಲಿ ಹಾಸನದ ಕಛೇರಿಯ ವೇಳೆಯಲ್ಲಿ ನೋಡಲು ಅವಕಾಶವಿರುತ್ತದೆ. ಸದರಿ ಅನುಪಯುಕ್ತ ವಾಹನಗಳ ವಿವರಗಳನ್ನು ಈ ಕೆಳಗೆ ನಮೂದಿಸಲಾಗಿದೆ.

| ಕ್ರ.ಸಂ. | ವಾಹನ ಮಾದರಿ ಮತ್ತು ಸಂಖ್ಯೆ | ನಮೂನೆ |
|---|---|---|
| 1. | ಕಾರು ಎಂವೈಹೆಚ್ 9700 | 1980 |
| 2. | ಬುಲೆಟ್ ಮೋಟಾರ್ ಸೈಕಲ್ ಸಿಎಜಿ 5614 | 1981 |

**ಹರಾಜಿನ ಷರತ್ತುಗಳು ಮತ್ತು ನಿಬಂಧನೆಗಳು**

1. ಸದರಿ ಅನುಪಯುಕ್ತ ವಾಹನಗಳನ್ನು ಜಿಲ್ಲಾ ಸಶಸ್ತ್ರ ಮೀಸಲು ಪಡೆ ಹೊಸಲೈನ್ ರಸ್ತೆ ಹಾಸನದಲ್ಲಿ ಬಹಿರಂಗ ಹರಾಜು ಮಾಡಲಾಗುವುದು. ಅವುಗಳು ಹಾಲಿ ಯಾವ ಸ್ಥಿತಿಯಲ್ಲಿ ಇದೆಯೋ ಅದೇ ಸ್ಥಿತಿಯಲ್ಲಿ ವಿಲೇವಾರಿ ಮಾಡಲಾಗುವುದು.
2. ಹರಾಜಿನಲ್ಲಿ ಭಾಗವಹಿಸಲು ಇಚ್ಛಿಸುವ ಪ್ರತಿಯೊಬ್ಬರು ಪ್ರತಿ ವಾಹನ ಒಂದಕ್ಕೆ ರೂ.5,000-00 ಠೇವಣಿಯನ್ನು ಹರಾಜಿಗೆ ಮುನ್ನ ನಗದಾಗಿ ಪಾವತಿಸತಕ್ಕದ್ದು. ಠೇವಣಿ ಪಾವತಿಸದೆ ಹರಾಜಿನಲ್ಲಿ ಭಾಗವಹಿಸುವಂತಿಲ್ಲ.
3. ಟೆಂಡರುಗಳನ್ನು ಸಲ್ಲಿಸಬಯಸುವ ಸಾರ್ವಜನಿಕರು ಮೊಹರು ಮಾಡಿದ ಲಕೋಟೆಯ ಮೇಲ್ಭಾಗದಲ್ಲಿ "ನಿರುಪಯುಕ್ತ ವಾಹನಗಳಿಗಾಗಿ" ಎಂದು ಬರೆದು ಅದರಡಿಯಲ್ಲಿ ಪೊಲೀಸ್ ಸೂಪರಿಂಟೆಂಡೆಂಟ್, ಹಾಸನ ಜಿಲ್ಲೆ, ಹಾಸನ ಎಂದು ನಮೂದಿಸಿ ಈ ವಿಳಾಸಕ್ಕೆ ಖುದ್ದಾಗಿ ಇಲ್ಲವೇ ಅಂಚೆ ಮೂಲಕ ದಿನಾಂಕ:16.08.2006 ರಂದು ಸಂಜೆ 4.00 ಗಂಟೆ ಒಳಗಾಗಿ ಈ ಕಛೇರಿಗೆ ತಲುಪುವಂತೆ ಸಲ್ಲಿಸತಕ್ಕದ್ದು. ನಂತರ ಬಂದ ಟೆಂಡರುಗಳನ್ನು ಪರಿಗಣಿಸಲಾಗುವುದಿಲ್ಲ.
4. ಪ್ರತಿಯೊಬ್ಬ ಟೆಂಡರುದಾರರು ಪ್ರತಿ ವಾಹನಕ್ಕೆ ರೂ.5,000-00 (ಐದು ಸಾವಿರ) ರೂಪಾಯಿಗಳನ್ನು ಪೊಲೀಸ್ ಸೂಪರಿಂಟೆಂಡ್, ಹಾಸನ ಜಿಲ್ಲೆ, ಇವರ ಹೆಸರಿನಲ್ಲಿ ತೆಗೆಸಿದ ಡಿ.ಡಿ.ಯನ್ನು ಟೆಂಡರ್ ಜೊತೆ ಲಗತ್ತಿಸಬೇಕು. ಡಿ.ಡಿ. ಯನ್ನು ಕ್ರಾಸ್ ಮಾಡಬಾರದು. ಹಾಗೆ ಮಾಡಿದಲ್ಲಿ ಅದನ್ನು ಅನರ್ಹವೆಂದು ಪರಿಗಣಿಸಲಾಗುವುದು.
5. ಯಾವುದೇ ಠೇವಣಿ ಹಣಕ್ಕೆ ಬಡ್ಡಿ ಕೊಡಲಾಗುವುದಿಲ್ಲ. ಹಾಗೂ ಟೆಂಡರ್ ಫಾರಂಗಳನ್ನು ವರ್ಗಾವಣೆ ಮಾಡಲಾಗುವುದಿಲ್ಲ.
6. ಟೆಂಡರ್ ಫಾರಂನಲ್ಲಿ ಹೆಚ್ಚಿನ ಮೊತ್ತವನ್ನು ಅಂಕಿ ಮತ್ತು ಅಕ್ಷರಗಳೆರಡರಲ್ಲಿಯೂ ಸ್ಪಷ್ಟವಾಗಿ ನಮೂದಿಸಿರಬೇಕು. ಏನಾದರೂ ತಿದ್ದುಪಡಿ ಮಾಡಿದ್ದಲ್ಲಿ ಟೆಂಡರ್‌ದಾರರು ತಮ್ಮ ಪೂರ್ಣ ಸಹಿ ಮಾಡಿ ತಿದ್ದುಪಡಿಯನ್ನು ದೃಢೀಕರಿಸಿರಬೇಕು.
7. ಈ ಹರಾಜಿನಲ್ಲಿ ಅತಿ ಹೆಚ್ಚಿನ ಬೆಲೆ ದಾಖಲುಗೊಳಿಸಿದ ನಂತರ ಸ್ವೀಕೃತವಾದ ಟೆಂಡರ್ ಲಕೋಟೆಗಳನ್ನು ಪೊಲೀಸ್ ಸೂಪರಿಂಟೆಂಡೆಂಟ್, ಹಾಸನ ಜಿಲ್ಲೆ, ಅವರಾಗಲೀ ಅಥವಾ ಅವರಿಂದ ನೇಮಿಸಲ್ಪಟ್ಟ ಅಧಿಕಾರಿಗಳಾಗಲೀ ಸಾರ್ವಜನಿಕರ ಸಮ್ಮುಖದಲ್ಲಿ ಬಹಿರಂಗಪಡಿಸುವರು. ಹರಾಜಿನಲ್ಲಿ ದಾಖಲಾದ ಹೆಚ್ಚಿನ ಬಿಡ್ ಬೆಲೆ ಅಥವಾ ಟೆಂಡರಿನಲ್ಲಿ ದಾಖಲಿಸಿದ ಹೆಚ್ಚಿನ ಬೆಲೆ ಇವೆರಡರಲ್ಲಿ ಅತೀ ಹೆಚ್ಚಿನ ದರ ದಾಖಲಿಸಿದವರನ್ನು ಯಶಸ್ವಿ ಟೆಂಡರ್: ಬಿಡ್‌ದಾರರೆಂದು ಪರಿಗಣಿಸಲಾಗುವುದು.
8. ಯಶಸ್ವಿಯಾದವರ ಅಂಗೀಕೃತ ಹೆಚ್ಚಿನ ಬೆಲೆಯಲ್ಲಿ ಶೇಕಡಾ 25ರಷ್ಟು ಹಣವನ್ನು ಅವರು ಹರಾಜಿನ ಸ್ಥಳದಲ್ಲಿ ಹರಾಜಿನ ದಿನವೇ ತುಂಬತಕ್ಕದ್ದು. ಈ ಹಣಕ್ಕೂ ಯಾವುದೇ ಬಡ್ಡಿ ನೀಡಲಾಗುವುದಿಲ್ಲ. ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕರ್ನಾಟಕ ರಾಜ್ಯ, ಬೆಂಗಳೂರು ರವರಿಂದ ವಿಲೇವಾರಿಗೆ ಒಪ್ಪಿಗೆ ಬಂದ ನಂತರವೇ ಉಳಿದ ಹಣವನ್ನು ಹಾಗೂ ಮಾರಾಟ ತೆರಿಗೆ

ಇತ್ಯಾದಿಯನ್ನು ಕಟ್ಟಿಸಿಕೊಳ್ಳಲಾಗುವುದು. ಹಾಗೂ ಪ್ರಾದೇಶಿಕ ಶುಲ್ಕ ವಗೈರೆ ಅವರ ಸ್ವಂತ ಹಣದಿಂದ ಭರಿಸಿ ಮಾಲೀಕತ್ವ ಬದಲಾವಣೆ ಮಾಡಿಕೊಂಡ ಬಗ್ಗೆ ದಾಖಲಾತಿಗಳನ್ನು ಒದಗಿಸಿದ ನಂತರ ಇಲ್ಲವೇ ವಾಹನ ಉಪಯೋಗಿಸದೇ ಕುಟ್ಟು ಗುಜರಿಗೆ ಹಾಕಲಾಗುವುದೆಂದು ಬರೆದುಕೊಟ್ಟ ಮೇಲೆ ಅವರ ಸ್ವಂತ ಖರ್ಚಿನಲ್ಲಿ ಸಾಗಿಸಿಕೊಳ್ಳಲು ವಾಹನಗಳನ್ನು ಯಶಸ್ವಿದಾರರ ವಶಕ್ಕೆ ವಹಿಸಿಕೊಡಲಾಗುವುದು.

9. ಎಲ್ಲಾ ಹಣವನ್ನು ಪೊಲೀಸ್ ಸೂಪರಿಂಟೆಂಡೆಂಟ್, ಹಾಸನ ಜಿಲ್ಲೆ, ಹಾಸನ ಇವರ ಕಛೇರಿಯ ನಗದು ಶಾಖೆಯಲ್ಲಿ ನಗದಾಗಿಯೇ ತುಂಬಬೇಕು. ಚೆಕ್ ಅಥವಾ ಡಿ.ಡಿ. ಮೂಲಕ ಹಣ ಸ್ವೀಕರಿಸುವುದಿಲ್ಲ.
10. ಅನುಪಯುಕ್ತ ವಾಹನಗಳಿಗೆ ಮಾರಾಟ ತೆರಿಗೆಯನ್ನು ಯಶಸ್ವಿ ಬಿಡ್‌ದಾರರಿಂದ ಚಾಲ್ತಿಯಲ್ಲಿರುವ ನಿಯಮಗಳ ಪ್ರಕಾರ ವಿಧಿಸಿ ವಸೂಲು ಮಾಡಲಾಗುವುದು.
11. ಹರಾಜು ಮುಗಿದ ನಂತರ ಯಶಸ್ವಿಯಾಗದ ಟೆಂಡರು: ಬಿಡ್‌ದಾರರ ಠೇವಣಿ ಹಣವನ್ನು ಕೂಡಲೇ ಹಿಂತಿರುಗಿಸಲಾಗುವುದು. ಸಾರ್ವಜನಿಕರು ಇಲಾಖಾ ನಿಯಮಗಳಿಗೆ ಬದ್ಧರಾಗಿರತಕ್ಕದ್ದು.
12. ಯಶಸ್ವಿಯಾದ ಟೆಂಡರ್: ಬಿಡ್‌ದಾರರು ತಮ್ಮ ತಪ್ಪು ಗ್ರಹಿಕೆಯಿಂದ ಇಲಾಖೆಗೆ ನಷ್ಟವಾಗುವಂತಹ ಸಂದರ್ಭ ಉದ್ಭವಿಸಿದಲ್ಲಿ ಅಂತಹವರು ಮುಂಗಡವಾಗಿ ಪಾವತಿಸಿರುವ ಹಣದಲ್ಲಿ ನಷ್ಟವನ್ನು ಮಾಡಿಕೊಳ್ಳುವ ಅಧಿಕಾರವನ್ನು ಕಾಯ್ದಿರಿಸಲಾಗಿದೆ. ಈ ರೀತಿ ವಸೂಲಿ ಮಾಡಲು ತೀರ್ಮಾನಿಸಿದ ಹಣವನ್ನು ಸ್ಥಳದಲ್ಲಿಯೇ ಪಾವತಿಸತಕ್ಕದ್ದು. ತಪ್ಪಿದ್ದಲ್ಲಿ ಸಂಬಂಧಪಟ್ಟವರ ವಿರುದ್ಧ ಕಾನೂನು ರೀತಿ ಕ್ರಮ ಜರುಗಿಸಲಾಗುವುದು.
13. ಈ ಹರಾಜಿನ ವಿಷಯದಲ್ಲಿ ಯಾವುದೇ ಕಾರಣಕ್ಕಾಗಿ ರದ್ದು ಮಾಡುವ ಇಲ್ಲವೇ ತಿರಸ್ಕರಿಸುವ ಅಧಿಕಾರವನ್ನು ಪೊಲೀಸ್ ಅಧೀಕ್ಷಕರು, ಹಾಸನ ಜಿಲ್ಲೆ, ಹಾಸನ ಇವರು ಹೊಂದಿರುತ್ತಾರೆ. ಮತ್ತು ಇವರ ತೀರ್ಮಾನವೇ ಅಂತಿಮವಾದದ್ದು.
14. ಮೇಲೆ ತಿಳಿಸಿರುವ ಹರಾಜಿನ ವಿಷಯದಲ್ಲಿ ಯಾವುದೇ ವಾದ-ವಿವಾದ ಉಂಟಾದಲ್ಲಿ ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕರ್ನಾಟಕ ರಾಜ್ಯ, ಬೆಂಗಳೂರು ಇವರು ಮಾಡುವ ನಿರ್ಣಯವೇ ಅಂತಿಮವಾಗಿರುತ್ತದೆ.
15. ಹರಾಜಿನಲ್ಲಿ ಭಾಗವಹಿಸುವ ಎಲ್ಲ ಬಿಡ್‌ದಾರರು ತಮ್ಮ ಪರಿಪೂರ್ಣ ವಿಳಾಸವನ್ನು ಬರೆದಿರುವ ಚೀಟಿಯೊಂದಿಗೆ ಠೇವಣಿ ಹಣವನ್ನು ಪಾವತಿ ಮಾಡಿ ಹೆಸರನ್ನು ನೊಂದಾಯಿಸಿಕೊಳ್ಳತಕ್ಕದ್ದು.
16. ಟೆಂಡರ್ ಫಾರಂಗಳಲ್ಲಿ ಟೆಂಡರುದಾರರು ತಮ್ಮ ಸಂಪೂರ್ಣ ವಿಳಾಸವನ್ನು ಸ್ಪಷ್ಟವಾಗಿ ನಮೂದಿಸಿರಬೇಕು. ಟೆಂಡರ್ ಫಾರಂ ನಮೂನೆಯನ್ನು ಈ ಕೆಳಗೆ ಕೊಡಲಾಗಿದೆ.

**ಟೆಂಡರ್ ಫಾರಂ ನಮೂನೆ**

**ಅನುಪಯುಕ್ತ ಪೊಲೀಸ್ ವಾಹನಗಳಿಗಾಗಿ ಟೆಂಡರು**

**ಗೆ,**

ಪೊಲೀಸ್ ಸೂಪರಿಂಟೆಂಡೆಂಟ್ ರವರು,
ಹಾಸನ ಜಿಲ್ಲೆ, ಹಾಸನ.

**ಮಾನ್ಯರೇ,**

ತಮ್ಮ ಕಛೇರಿಯ ಅಧಿಸೂಚನೆ ಸಂಖ್ಯೆ: ಪಿಎಂಟಿ:110:02-2005 ದಿನಾಂಕ:ರಲ್ಲಿ ತಿಳಿಸಿರುವ ……………..ಸಂಖ್ಯೆಯ ವಾಹನವನ್ನು ರೂ. (ರೂಪಾಯಿ ……………..) ಗಳಿಗೆ ಖರೀದಿಸಲು ಇಚ್ಛಿಸಿರುತ್ತೇನೆ.

ತಮ್ಮ ವಿಶ್ವಾಸಿ,
ಬಿಡ್‌ದಾರರ ಪೂರ್ಣ ಸಹಿ ಮತ್ತು ವಿಳಾಸ.
ಸೂಪರಿಂಟೆಂಡೆಂಟ್ ಆಫ್ ಪೊಲೀಸ್,
ಹಾಸನ ಜಿಲ್ಲೆ, ಹಾಸನ.

ಪಿ.ಆರ್.388

**ಕರ್ನಾಟಕ ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)**

**ಕಾರ್ಯನಿರ್ವಾಹಕ ಅಭಿಯಂತರರ ಕಛೇರಿ, ಸಣ್ಣ ನೀರಾವರಿ ವಿಭಾಗ, ಬೆಳಗಾವಿ, ದೂರವಾಣಿ/ ಫ್ಯಾಕ್ಸ್: 0831-2423008**

**ಟೆಂಡರ್**

**ಅವಧಿ ವಿಸ್ತರಣೆ (ದ್ವಿಲಕೋಟೆ ಪದ್ಧತಿ)**

**ಕ್ರ.ಸಂ. ಸನೀವಿ/ ಬೆಳಗಾವಿ/ ಜೆ.ಇ./ ಟೆಂಡರ್/ 06-07/ 1764, ದಿನಾಂಕ:1ನೇ ಜುಲೈ, 2006**

ಈ ಕಾರ್ಯಾಲಯದ ಟೆಂಡರ್ ಪ್ರಕಟಣೆ ಸಂಖ್ಯೆ:ಸ.ನಿ.ವಿ./ ಬೆಳಗಾಂವಿ/ ಜೀಇ/ ಟೆಂಡರ್/ 05-06/ 431 ದಿನಾಂಕ:17.02.2006ರಲ್ಲಿ ಆಹ್ವಾನಿಸಲಾದ ಟೆಂಡರಿನ ದಿನಾಂಕಗಳನ್ನು ಈ ಕೆಳಗಿನಂತೆ ಮುಂದೂಡಲಾಗಿದೆ.

**ಕಾಮಗಾರಿಯ ವಿವರಣೆ**

| ಅ. ನಂ. | ಕೆಲಸದ ಹೆಸರು | ಟೆಂಡರಿಗಿಟ್ಟ ಅಂದಾಜು ಮೊತ್ತ ಲಕ್ಷ ರೂ.ಗಳಲ್ಲಿ | ಇಡಗಂಟು ಅಂದಾಜು ಮೊತ್ತ ಲಕ್ಷ ರೂ.ಗಳಲ್ಲಿ | ಟೆಂಡರ್ ಫಾರ್ಮ್ ಬೆಲೆ ರೂ. ತೆರಿಗೆ ಪ್ರತ್ಯೇಕ ಹಿಂದಿರುಗಿಸಲಾಗುವುದು | ಕೆಲಸವನ್ನು ಮುಗಿಸುವ ಕಾಲಮಿತಿ ಮಳೆಗಾಲ ಬಿಟ್ಟು | ಗುತ್ತಿಗೆದಾರರ ದರ್ಜೆ |
|---|---|---|---|---|---|---|
| 1 | 2 | 3 | 4 | 5 | 6 | 7 |
| 1. | ಬೆಳಗಾವಿ ಜಿಲ್ಲೆಯ ಹುಕ್ಕೇರಿ ತಾ. ಮತ್ತಿವಾಡ ಗ್ರಾಮದ ಹತ್ತಿರ ಸ.ನೀ. ಕೆರೆ ನಿರ್ಮಾಣ. | 92.54 | 0.93 | 9300+ ತೆರಿಗೆ | 12 ತಿಂಗಳು | ಪ್ರಥಮ ದರ್ಜೆ ಸಿವ್ಹಿಲ್ |

1. ಖುಲ್ಲಾ ಟೆಂಡರ್ ಫಾರ್ಮ್‌ಗಳನ್ನು ನೀಡುವ ದಿನಾಂಕ: **27.07.2006 ರಿಂದ 28.07.2006.**
2. ಟೆಂಡರ್‌ಗಳನ್ನು ಸ್ವೀಕರಿಸುವ ದಿನಾಂಕ: **04.08.2006.**

(ಸಾಧ್ಯವಾದಲ್ಲಿ ದಿನಾಂಕ: 07.08.2006ರಂದು ಭಾಗ-1 ಟೆಂಡರ್‌ಗಳನ್ನು ತೆರೆಯಲಾಗುವುದು)

**ಬಾಕಿ ಉಪವಿಧಿಗಳಲ್ಲಿ ಯಾವುದೇ ಬದಲಾವಣೆ ಇರುವುದಿಲ್ಲ.**

**ಮನೋಹರ ರಾ. ವಡ್ಡರ**
ಕಾರ್ಯನಿರ್ವಾಹಕ ಇಂಜನೀಯರ್,
ಸಣ್ಣ ನೀರಾವರಿ ವಿಭಾಗ, ಬೆಳಗಾವಿ.

ಪಿ.ಆರ್.390

## ಕರ್ನಾಟಕ ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)
## ಕಾರ್ಯನಿರ್ವಾಹಕ ಅಭಿಯಂತರರ ಕಛೇರಿ, ಸಣ್ಣ ನೀರಾವರಿ ವಿಭಾಗ, ಬೆಳಗಾವಿ, ದೂರವಾಣಿ/ ಫ್ಯಾಕ್ಸ್: 0831-2423008
## ಟೆಂಡರ್
## ಅವಧಿ ವಿಸ್ತರಣೆ (ದ್ವಿಲಕೋಟೆ ಪದ್ಧತಿ)
## ಕ್ರ.ಸಂ. ಸನೀವಿ/ ಬೆಳಗಾವಿ/ ಜೆ.ಇ./ ಟೆಂಡರ್/ 06-07/ 1765, ದಿನಾಂಕ:1ನೇ ಜುಲೈ, 2006

ಈ ಕಾರ್ಯಾಲಯದ ಟೆಂಡರ್ ಪ್ರಕಟಣೆ ಸಂಖ್ಯೆ:ಸ.ನಿ.ವಿ./ ಬೆಳಗಾಂವಿ/ ಜೀಇ/ ಟೆಂಡರ್/ 05-06/ 432 ದಿನಾಂಕ:17.02.2006ರಲ್ಲಿ ಆಹ್ವಾನಿಸಲಾದ ಟೆಂಡರಿನ ದಿನಾಂಕಗಳನ್ನು ಈ ಕೆಳಗಿನಂತೆ ಮುಂದೂಡಲಾಗಿದೆ.

**ಕಾಮಗಾರಿಯ ವಿವರಣೆ**

| ಅ. ನಂ. | ಕೆಲಸದ ಹೆಸರು | ಟೆಂಡರಿಗಿಟ್ಟ ಅಂದಾಜು ಮೊತ್ತ ಲಕ್ಷ ರೂ.ಗಳಲ್ಲಿ | ಇಡಗಂಟು ಅಂದಾಜು ಮೊತ್ತ ಲಕ್ಷ ರೂ.ಗಳಲ್ಲಿ | ಟೆಂಡರ್ ಫಾರ್ಮ್ ಬೆಲೆ ರೂ. ತೆರಿಗೆ ಪ್ರತ್ಯೇಕ ಹಿಂದಿರುಗಿಸಲಾಗುವುದು | ಕೆಲಸವನ್ನು ಮುಗಿಸುವ ಕಾಲಮಿತಿ ಮಳೆಗಾಲ ಬಿಟ್ಟು | ಗುತ್ತಿಗೆದಾರರ ದರ್ಜೆ |
|---|---|---|---|---|---|---|
| 1 | 2 | 3 | 4 | 5 | 6 | 7 |
| 1. | ಬೆಳಗಾವಿ ಜಿಲ್ಲೆಯ ಖಾನಾಪುರ ತಾಲ್ಲೂಕು, ದೇವಾಚಿಹಟ್ಟಿ ಗ್ರಾಮದ ಹತ್ತಿರ ಮಲಪ್ರಭಾ ನದಿಗೆ ಅಡ್ಡವಾಗಿ ಬ್ರಿಡ್ಜ್ ಕಂ ಬ್ಯಾರೇಜ್ ನಿರ್ಮಾಣ. | 89.17 | 0.90 | 9000+ ತೆರಿಗೆ | 18 ತಿಂಗಳು | ಪ್ರಥಮ ದರ್ಜೆ ಸಿವ್ಹಿಲ್ |

1. ಖುಲ್ಲಾ ಟೆಂಡರ್ ಫಾರ್ಮ್‌ಗಳನ್ನು ನೀಡುವ ದಿನಾಂಕ: **27.07.2006 ರಿಂದ 28.07.2006.**
2. ಟೆಂಡರ್‌ಗಳನ್ನು ಸ್ವೀಕರಿಸುವ ದಿನಾಂಕ: **04.08.2006.**

(ಸಾಧ್ಯವಾದಲ್ಲಿ **ದಿನಾಂಕ: 07.08.2006ರಂದು** ಭಾಗ-1 ಟೆಂಡರ್‌ನ್ನು ತೆರೆಯಲಾಗುವುದು)

**ಬಾಕಿ ಉಪವಿಧಿಗಳಲ್ಲಿ ಯಾವುದೇ ಬದಲಾವಣೆ ಇರುವುದಿಲ್ಲ.**

**ಮನೋಹರ ರಾ. ವಡ್ಡರ**
ಕಾರ್ಯನಿರ್ವಾಹಕ ಇಂಜನೀಯರ್,
ಸಣ್ಣ ನೀರಾವರಿ ವಿಭಾಗ, ಬೆಳಗಾವಿ.

ಪಿ.ಆರ್.391

## ಕರ್ನಾಟಕ ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)
## ಕಾರ್ಯನಿರ್ವಾಹಕ ಅಭಿಯಂತರರ ಕಛೇರಿ, ಸಣ್ಣ ನೀರಾವರಿ ವಿಭಾಗ, ಬೆಳಗಾವಿ, ದೂರವಾಣಿ/ ಫ್ಯಾಕ್ಸ್: 0831-2423008
## ಟೆಂಡರ್
## ಅವಧಿ ವಿಸ್ತರಣೆ (ದ್ವಿಲಕೋಟೆ ಪದ್ಧತಿ)
## ಕ್ರ.ಸಂ. ಸನೀವಿ/ ಬೆಳಗಾವಿ/ ಜೆ.ಇ./ ಟೆಂಡರ್/ 06-07/ 1766, ದಿನಾಂಕ:1ನೇ ಜುಲೈ, 2006

ಈ ಕಾರ್ಯಾಲಯದ ಟೆಂಡರ್ ಪ್ರಕಟಣೆ ಸಂಖ್ಯೆ:ಸ.ನಿ.ವಿ./ ಬೆಳಗಾಂವಿ/ ಜೀಇ/ ಟೆಂಡರ್/ 05-06/ 438 ದಿನಾಂಕ:18.02.2006ರಲ್ಲಿ ಆಹ್ವಾನಿಸಲಾದ ಟೆಂಡರಿನ ದಿನಾಂಕಗಳನ್ನು ಈ ಕೆಳಗಿನಂತೆ ಮುಂದೂಡಲಾಗಿದೆ.

**ಕಾಮಗಾರಿಯ ವಿವರಣೆ**

| ಅ. ನಂ. | ಕೆಲಸದ ಹೆಸರು | ಟೆಂಡರಿಗಿಟ್ಟ ಅಂದಾಜು ಮೊತ್ತ ಲಕ್ಷ ರೂ.ಗಳಲ್ಲಿ | ಇಡಗಂಟು ಅಂದಾಜು ಮೊತ್ತ ಲಕ್ಷ ರೂ.ಗಳಲ್ಲಿ | ಟೆಂಡರ್ ಫಾರ್ಮ್ ಬೆಲೆ ರೂ. ತೆರಿಗೆ ಪ್ರತ್ಯೇಕ ಹಿಂದಿರುಗಿಸಲಾಗುವುದು | ಕೆಲಸವನ್ನು ಮುಗಿಸುವ ಕಾಲಮಿತಿ ಮಳೆಗಾಲ ಬಿಟ್ಟು | ಗುತ್ತಿಗೆದಾರರ ದರ್ಜೆ |
|---|---|---|---|---|---|---|
| 1 | 2 | 3 | 4 | 5 | 6 | 7 |
| 1. | ಬೆಳಗಾವಿ ಜಿಲ್ಲೆಯ ಗೋಕಾಕ್ ತಾಲ್ಲೂಕು, ಸಿಂಗಳಾಪುರ ಗ್ರಾಮದ ಹತ್ತಿರ ಘಟಪ್ರಭಾ ನದಿಗೆ ಅಡ್ಡವಾಗಿ ಬ್ರಿಡ್ಜ್ ಕಂ ಬ್ಯಾರೇಜ್ ನಿರ್ಮಾಣ. | 171.73 | 1.72 | 17000+ ತೆರಿಗೆ | 18 ತಿಂಗಳು | ಪ್ರಥಮ ದರ್ಜೆ ಸಿವ್ಹಿಲ್ |

1. ಖುಲ್ಲಾ ಟೆಂಡರ್ ಫಾರ್ಮ್‌ಗಳನ್ನು ನೀಡುವ ದಿನಾಂಕ: **27.07.2006 ರಿಂದ 28.07.2006.**
2. ಟೆಂಡರ್‌ಗಳನ್ನು ಸ್ವೀಕರಿಸುವ ದಿನಾಂಕ: **04.08.2006.**

(ಸಾಧ್ಯವಾದಲ್ಲಿ **ದಿನಾಂಕ: 07.08.2006ರಂದು** ಭಾಗ-1 ಟೆಂಡರ್‌ನ್ನು ತೆರೆಯಲಾಗುವುದು)

**ಬಾಕಿ ಉಪವಿಧಿಗಳಲ್ಲಿ ಯಾವುದೇ ಬದಲಾವಣೆ ಇರುವುದಿಲ್ಲ.**

**ಮನೋಹರ ರಾ. ವಡ್ಡರ**
ಕಾರ್ಯನಿರ್ವಾಹಕ ಇಂಜನೀಯರ್,
ಸಣ್ಣ ನೀರಾವರಿ ವಿಭಾಗ, ಬೆಳಗಾವಿ.

ಪಿ.ಆರ್.392

## ಕರ್ನಾಟಕ ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಕಾರ್ಯನಿರ್ವಾಹಕ ಅಭಿಯಂತರರ ಕಛೇರಿ, ಸಣ್ಣ ನೀರಾವರಿ ವಿಭಾಗ, ಬೆಳಗಾವಿ, ದೂರವಾಣಿ/ ಫ್ಯಾಕ್ಸ್: 0831-2423008

## ಟೆಂಡರ್

## ಅವಧಿ ವಿಸ್ತರಣೆ (ದ್ವಿಲಕೋಟೆ ಪದ್ಧತಿ)

## ಕ್ರ.ಸಂ. ಸನೀವಿ/ ಬೆಳಗಾವಿ/ ಜೆ.ಇ./ ಟೆಂಡರ್/ 06-07/ 1767, ದಿನಾಂಕ:1ನೇ ಜುಲೈ, 2006

ಈ ಕಾರ್ಯಾಲಯದ ಟೆಂಡರ್ ಪ್ರಕಟಣೆ ಸಂಖ್ಯೆ:ಸ.ನಿ.ವಿ./ ಬೆಳಗಾಂವಿ/ ಜೀಇ/ ಟೆಂಡರ್/ 05-06/ 754 ದಿನಾಂಕ:21.03.2006ರಲ್ಲಿ ಆಹ್ವಾನಿಸಲಾದ ಟೆಂಡರಿನ ದಿನಾಂಕಗಳನ್ನು ಈ ಕೆಳಗಿನಂತೆ ಮುಂದೂಡಲಾಗಿದೆ.

**ಕಾಮಗಾರಿಯ ವಿವರಣೆ**

| ಅ. ನಂ. | ಕೆಲಸದ ಹೆಸರು | ಟೆಂಡರಿಗಿಟ್ಟ ಅಂದಾಜು ಮೊತ್ತ ಲಕ್ಷ ರೂ.ಗಳಲ್ಲಿ | ಇಡಗಂಟು ಅಂದಾಜು ಮೊತ್ತ ಲಕ್ಷ ರೂ.ಗಳಲ್ಲಿ | ಟೆಂಡರ್ ಫಾರ್ಮ್ ಬೆಲೆ ರೂ. ತೆರಿಗೆ ಪ್ರತ್ಯೇಕ ಹಿಂದಿರುಗಿಸಲಾಗುವುದು | ಕೆಲಸವನ್ನು ಮುಗಿಸುವ ಕಾಲಮಿತಿ ಮಳೆಗಾಲ ಬಿಟ್ಟು | ಗುತ್ತಿಗೆದಾರರ ದರ್ಜೆ |
|---|---|---|---|---|---|---|
| 1 | 2 | 3 | 4 | 5 | 6 | 7 |
| 1. | ಬೆಳಗಾವಿ ಜಿಲ್ಲೆಯ ಚಿಕ್ಕೋಡಿ ತಾಲ್ಲೂಕು, ಸಿದ್ನಾಳ ಗ್ರಾಮದ ಹತ್ತಿರ ವೇದಗಂಗಾ ನದಿಗೆ ಅಡ್ಡವಾಗಿ ಬ್ರಿಡ್ಜ್ ಕಂ ಬ್ಯಾರೇಜ್ ನಿರ್ಮಾಣ. | 131.00 | 1.31 | 13000+ ತೆರಿಗೆ | 18 ತಿಂಗಳು | ಪ್ರಥಮ ದರ್ಜೆ ಸಿವ್ಹಿಲ್ |
| 2. | ಬೆಳಗಾವಿ ಜಿಲ್ಲೆಯ ಚಿಕ್ಕೋಡಿ ತಾಲ್ಲೂಕು, ಬಾರವಾಡ ಗ್ರಾಮದ ದೂಧಗಂಗಾ ನದಿಗೆ ಅಡ್ಡವಾಗಿ ಬ್ರಿಡ್ಜ್ ಕಂ ಬ್ಯಾರೇಜ್ ನಿರ್ಮಾಣ. | 126.43 | 1.265 | 12650+ ತೆರಿಗೆ | 18 ತಿಂಗಳು | ಪ್ರಥಮ ದರ್ಜೆ ಸಿವ್ಹಿಲ್ |

1. ಖುಲ್ಲಾ ಟೆಂಡರ್ ಫಾರ್ಮ್‌ಗಳನ್ನು ನೀಡುವ ದಿನಾಂಕ: **27.07.2006 ರಿಂದ 28.07.2006.**
2. ಟೆಂಡರ್‌ಗಳನ್ನು ಸ್ವೀಕರಿಸುವ ದಿನಾಂಕ: **04.08.2006.**

(ಸಾಧ್ಯವಾದಲ್ಲಿ **ದಿನಾಂಕ: 07.08.2006ರಂದು** ಭಾಗ-1 ಟೆಂಡರ್‌ನ್ನು ತೆರೆಯಲಾಗುವುದು)

**ಬಾಕಿ ಉಪವಿಧಿಗಳಲ್ಲಿ ಯಾವುದೇ ಬದಲಾವಣೆ ಇರುವುದಿಲ್ಲ.**

**ಮನೋಹರ ರಾ. ವಡ್ಡರ**
ಕಾರ್ಯನಿರ್ವಾಹಕ ಇಂಜನೀಯರ್,
ಸಣ್ಣ ನೀರಾವರಿ ವಿಭಾಗ, ಬೆಳಗಾವಿ.

ಪಿ.ಆರ್.393

## ಜಲ ಸಂಪನ್ಮೂಲ ಇಲಾಖೆ

## ಕಾರ್ಯಪಾಲಕ ಅಭಿಯಂತರವರ ಕಛೇರಿ, ನಂ.4 ಬಿ.ಆರ್.ಎಲ್.ಬಿ.ಸಿ. ವಿಭಾಗ, ಭದ್ರಾವತಿ

## ಟೆಂಡರ್ ಅವಧಿ ವಿಸ್ತರಣೆ ಪ್ರಕಟಣೆ

## ನಂ. ಕಾ.ಇಂ/ಬಿ.ಡಿಎನ್-4/ ಟೆಂಡರ್/ ಪಿ.ಬಿ. -3/ 2006-07

**ವಿಷಯ:** ಮೈಸೂರ್ ಪೇಪರ್ ಮಿಲ್ಸ್ ಸಕ್ಕರೆ ಕಾರ್ಖಾನೆಯ ರಸ್ತೆ ನಿರ್ಮಾಣದ ಟೆಂಡರ್ ಕಾಮಗಾರಿಗಳು.

**ಉಲ್ಲೇಖ:** 1) ಈ ಕಛೇರಿಯ ಟೆಂಡರ್ ಪ್ರಕಟಣೆ ಸಂಖ್ಯೆ: ಕಾ.ಇಂ./ ಬಿಡಿಎನ್-4/ ಪಿ.ಬಿ. -3/ ಟೆಂಡರ್ ಪ್ರಕಟಣೆ/ 2005-06 ದಿನಾಂಕ: 29.03.2006.

2) ಟೆಂಡರ್ ಅವಧಿ ವಿಸ್ತರಣೆ ಪ್ರಕಟಣೆ ಸಂಖ್ಯೆ: 294/11 ದಿನಾಂಕ: 02.05.2006.

3) ಟೆಂಡರ್ ಅವಧಿ ವಿಸ್ತರಣೆ ಪ್ರಕಟಣೆ ಸಂಖ್ಯೆ: 660/ 11 ದಿನಾಂಕ: 02.06.2006.

ಮೇಲ್ಕಂಡ ಉಲ್ಲೇಖಿತ ಪತ್ರದಲ್ಲಿ ಈ ಕಛೇರಿಯಿಂದ ಪ್ರಕಟಿಸಲಾದ ಮೈಸೂರ್ ಪೇಪರ್ ಮಿಲ್ಸ್ ಸಕ್ಕರೆ ಕಾರ್ಖಾನೆಯ ರಸ್ತೆ ನಿರ್ಮಾಣದ ಟೆಂಡರ್ ಕಾಮಗಾರಿಗಳಿಗೆ ಸಂಬಂಧಿಸಿದಂತೆ, ಪ್ರಕಟಿಸಿದ ಟೆಂಡರುಗಳಿಗೆ ಈ ಕೆಳಕಂಡಂತೆ ಟೆಂಡರ್ ಅವಧಿ ವಿಸ್ತರಣೆ ಮಾಡಲಾಗಿದೆ.

1. ನಿಗದಿತ ಖಾಲಿ ಟೆಂಡರ್ ಫಾರಂಗಳನ್ನು ಕೋರಿ ಅರ್ಜಿಯನ್ನು ಸಲ್ಲಿಸುವ ಕೊನೆಯ ದಿನಾಂಕ:26.07.2006 ಸಂಜೆ 5.30 ರವರೆಗೆ.

2. ಖಾಲಿ ಟೆಂಡರ್ ಫಾರಂಗಳನ್ನು ಕೊಡುವ ದಿನಾಂಕ: 27.07.2006 ಸಂಜೆ 5.30 ರವರೆಗೆ.

3. ತುಂಬಿದ ಟೆಂಡರ್‌ಗಳನ್ನು ಸ್ವೀಕರಿಸುವ ದಿನಾಂಕ:28.07.2006 ಸಂಜೆ 4.00 ರವರೆಗೆ.

ಟೆಂಡರ್ ಫಾರಂಗಳನ್ನು ದಿನಾಂಕ:28.07.2006 ಸಂಜೆ 4.30 ಗಂಟೆಗೆ ಅಥವಾ ಇನ್ನಾವುದೇ ದಿನದಂದು ಕಛೇರಿಯಲ್ಲಿ ಹಾಜರಿರುವ ಟೆಂಡರ್‌ದಾರರ ಅಥವಾ ಇನ್ನಾವುದೇ ನೊಂದಾಯಿತ ಗುತ್ತಿಗೆದಾರರ ಸಮಕ್ಷಮದಲ್ಲಿ ತೆರೆಯಲಾಗುವುದು. ಉಳಿದ ನಿಬಂಧನೆಗಳಲ್ಲಿ ಯಾವುದೇ ಬದಲಾವಣೆಗಳಿರುವುದಿಲ್ಲ.

**ಎಸ್.ಹೆಚ್. ಮಂಜಪ್ಪ**

ಪಿ.ಆರ್.394

ಕಾರ್ಯಪಾಲಕ ಅಭಿಯಂತರರು,
ನಂ.4, ಬಿ.ಆರ್.ಎಲ್.ಬಿ.ಸಿ. ವಿಭಾಗ, ಭದ್ರಾವತಿ.

## ತೋಟಗಾರಿಕೆ ಇಲಾಖೆ

## ತೋಟಗಾರಿಕೆ ನಿರ್ದೇಶನಾಲಯ, ಲಾಲ್‌ಬಾಗ್, ಬೆಂಗಳೂರು-4

## ಟೆಂಡರ್ ಪ್ರಕಟಣೆ

**ಸಂಖ್ಯೆ: ತೋಇ/ ತೋಬೆ/ ಸತೋಅ-2/ 17 ಲಿಂಕ್-I / 04-05, ಬೆಂಗಳೂರು, ದಿನಾಂಕ:3ನೇ ಜುಲೈ, 2006**

**ವಿಷಯ:** 2006-07ನೇ ಸಾಲಿಗೆ ತೆಂಗು ಟೆಕ್ನಾಲಜಿ ಮಿಷನ್ ಯೋಜನೆ ಅಡಿ Dessicated Coconut Unit/ Coconut Milk ಘಟಕಗಳನ್ನು ಸ್ಥಾಪಿಸಲು ಬೇಕಾಗುವ ಉಪಕರಣಗಳನ್ನು ಸರಬರಾಜು ಮಾಡುವ ಬಗ್ಗೆ.

**ಉಲ್ಲೇಖ:** 1) ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ 1999.
2) ಸರ್ಕಾರದ ಆದೇಶ ಪತ್ರ ಸಂಖ್ಯೆ: ಎಪಿ.ಎನ್.ಡಿ.ಸಿ.ಡಿ.:1530, ದಿನಾಂಕ:07.11.2000.
3) ಸಂಖ್ಯೆ: ಕೃತೋಇ 219 ತೋಇವಿ 2006 ದಿನಾಂಕ:23.06.2006.

2006-07ನೇ ಸಾಲಿಗೆ ರಾಜ್ಯದ ಮಂಡ್ಯ ಜಿಲ್ಲೆಯ ಜವರನಹಳ್ಳಿ ತೋಟಗಾರಿಕೆ ಕ್ಷೇತ್ರದಲ್ಲಿ ತೆಂಗು ಅಭಿವೃದ್ಧಿ ಮಂಡಳಿಯ ತೆಂಗು ಟೆಕ್ನಾಲಜಿ ಮಿಷನ್ ಯೋಜನೆ ಅಡಿ ಸರಬರಾಜು ಮಾಡಲು ಸರಬರಾಜುದಾರರಿಂದ (genuine manufacturers/ authorized distributors) ಟೆಂಡರನ್ನು ತೋಟಗಾರಿಕೆ ಇಲಾಖೆಯಿಂದ ಕರೆಯಲಾಗಿದೆ. ಟೆಂಡರ್‌ದಾರರು ದರಗಳನ್ನು ನಮೂದಿಸಿ ಮೊಹರಾದ ಟೆಂಡರನ್ನು ತೋಟಗಾರಿಕೆ ನಿರ್ದೇಶಕರು, ಲಾಲ್‌ಬಾಗ್, ಬೆಂಗಳೂರು-4 ರವರಿಗೆ ಕಳುಹಿಸತಕ್ಕದ್ದು. ಮೊಹರಾದ ಲಕೋಟೆಯ ಮೇಲೆ Dessicated Coconut Unit/ Coconut Milk Unit ಗಳ ಉಪಕರಣಗಳ ಪೂರೈಕೆಗೆ ಟೆಂಡರ್ 2005-06 ಎಂದು ನಮೂದಿಸತಕ್ಕದ್ದು. ನಿಗದಿತ ಟೆಂಡರ್ ಫಾರಂಗಳನ್ನು ತೋಟಗಾರಿಕೆ ನಿರ್ದೇಶನಾಲಯದಲ್ಲಿ ರೂ.500-00 (ರೂ.ಐದು ನೂರು ಮಾತ್ರ) ಹಣ ನೀಡಿ ದಿನಾಂಕ:01.07.2006 ರಿಂದ 15.09.2006 (12.00 ಗಂಟೆವರೆಗೆ) ಕಛೇರಿ ವೇಳೆಯಲ್ಲಿ ಪಡೆಯಬಹುದಾಗಿದೆ. ನಿಗದಿತ ಟೆಂಡರ್ ಫಾರಂ ಅಲ್ಲದೆ ಇತರೆ ಯಾವುದೇ ನಮೂನೆಯಲ್ಲಿ ಟೆಂಡರ್ ಸಲ್ಲಿಸಿದ್ದರೆ ಅದನ್ನು ತಿರಸ್ಕರಿಸಲಾಗುತ್ತದೆ. ಹೆಚ್ಚಿನ ಮಾಹಿತಿಯನ್ನು ತೋಟಗಾರಿಕೆ ನಿರ್ದೇಶಕರು, ಲಾಲ್‌ಬಾಗ್, ಬೆಂಗಳೂರುರವರ ಕಛೇರಿಯಿಂದ 10.00 ಗಂಟೆಯಿಂದ ಸಾಯಂಕಾಲ 5.30 ಗಂಟೆಯವರೆಗೆ ಪಡೆಯಬಹುದು. (ಭಾನುವಾರ ಮತ್ತು ಇತರೆ ಸರ್ಕಾರಿ ರಜಾ ದಿನಗಳನ್ನು ಹೊರತುಪಡಿಸಿ)

ಸರಬರಾಜು ಮಾಡುವ ಉಪಕರಣಗಳಿಗೆ ಹಾಗೂ installationಗೆ ದರವನ್ನು ಟೆಂಡರ್ ಫಾರಂನಲ್ಲಿ ನಮೂದಿಸಿ ಇದರ ಜೊತೆ ಒಟ್ಟು ಕೆಲಸಕ್ಕೆ ತಗಲುವ ಶೇ.1 ರಷ್ಟು ಭದ್ರತಾ ಠೇವಣಿ ಹಣವನ್ನು ಕ್ರಾಸ್ಡ್ ಡಿಮಾಂಡ್ ಡ್ರಾಫ್ಟ್ ಮೂಲಕ ತೋಟಗಾರಿಕೆ ನಿರ್ದೇಶಕರು, ಲಾಲ್‌ಬಾಗ್, ಬೆಂಗಳೂರುರವರ ಹೆಸರಿನಲ್ಲಿ ಪಡೆದು ಟೆಂಡರ್ ಜೊತೆಗೆ ದಿನಾಂಕ:15.09.2006ರಂದು ಮಧ್ಯಾಹ್ನ 4.00 ಗಂಟೆಯ ಒಳಗೆ ತೋಟಗಾರಿಕೆ ನಿರ್ದೇಶಕರು, ಲಾಲ್‌ಬಾಗ್, ಬೆಂಗಳೂರು-4, ಇಲ್ಲಿಗೆ ಕಛೇರಿ ವೇಳೆಯಲ್ಲಿ ಅಂಚೆ ಮುಖಾಂತರ ಅಥವಾ ಮುದ್ದಾಂ ಮುಖಾಂತರ ತಲುಪಿಸಬೇಕು.

ಟೆಂಡರ್‌ಗಳನ್ನು ದಿನಾಂಕ:16.09.2006ರಂದು ಪೂರ್ವಾಹ್ನ 11.00 ಗಂಟೆಗೆ ತೋಟಗಾರಿಕೆ ನಿರ್ದೇಶನಾಲಯ, ಲಾಲ್‌ಬಾಗ್, ಬೆಂಗಳೂರು ಇಲ್ಲಿ ತೆರೆಯಲಾಗುವುದು. ಈ ಪ್ರಕ್ರಿಯೆಯಲ್ಲಿ ಟೆಂಡರ್ ಒಪ್ಪಿಗೆಯಾಗದವರ ಭದ್ರತಾ ಠೇವಣಿ ಹಣವನ್ನು ಹಿಂತಿರುಗಿಸಲಾಗುವುದು. ಯಶಸ್ವಿಯಾದ ಟೆಂಡರ್‌ದಾರರು ಸಾಗಾಣಿಕೆ ವೆಚ್ಚ ತಾವೇ ಭರಿಸಿಕೊಂಡು ಸಂಬಂಧಪಟ್ಟ ಅಧಿಕಾರಿಗಳು ಸೂಚಿಸುವ ಸ್ಥಳಗಳಿಗೆ ಸರಬರಾಜು ಮಾಡಬೇಕು.

**ಟೆಂಡರ್ ಷರತ್ತುಗಳು:**

1. ಟೆಂಡರ್ ಫಾರಂ ಅನ್ನು ಸಂಸ್ಥೆಯ Proprietor ಅಥವಾ authorised signatory ರವರಿಂದ ಸಹಿಯಾಗಿರಬೇಕು. Authorise ಮಾಡಿರುವ ದಾಖಲೆಯನ್ನು ಲಗತ್ತಿಸಬೇಕು.
2. ಸಂಸ್ಥೆಯು ನೊಂದಾಯಿತ ಸಂಸ್ಥೆ ಆಗಿರಬೇಕು. (ಸಂಬಂಧಿತ ದಾಖಲೆಗಳನ್ನು ಲಗತ್ತಿಸಬೇಕು)
3. ಟೆಂಡರ್ ಫಾರಂ ಜೊತೆಗೆ VAT/ CST ಹಾಗೂ ಹಿಂದಿನ ವರ್ಷದ IT clearence ದಾಖಲೆಗಳನ್ನು ಲಗತ್ತಿಸಬೇಕು.
4. ನಿರ್ದೇಶನಾಲಯದಿಂದ ನಿಗದಿಪಡಿಸಿರುವ ನಿಯಮ / specification ನಂತೆ ಸರಬರಾಜುದಾರರು ಉತ್ತಮ ಗುಣಮಟ್ಟದ ಉಪಕರಣಗಳನ್ನು ಸರಬರಾಜು ಮಾಡತಕ್ಕದ್ದು.
5. ಸರಬರಾಜಾಗಬೇಕಾಗುವ ಉಪಕರಣಗಳು ಅನುಬಂಧದನ್ವಯ ನೀಡಿರುವ ಗುಣಮಟ್ಟ/ specification ಗಳನ್ನು ಹೊಂದಿರಬೇಕು.
6. ಸರಬರಾಜುದಾರರು ತಮ್ಮ ವಿಳಾಸವನ್ನು ಹಾಗೂ ದೂರವಾಣಿ ಸಂಖ್ಯೆಯನ್ನು ಪ್ರತ್ಯೇಕ statement ನಲ್ಲಿ ಟೆಂಡರ್ ಜೊತೆಗೆ ನೀಡಬೇಕು.
7. ಸರಬರಾಜುದಾರರು ಉಪಕರಣಗಳ ತಯಾರಕರಾಗಿರಬೇಕು/ ಉಪಕರಣಗಳ authorised ಸರಬರಾಜುದಾರರಾಗಿರಬೇಕು, ಸರಬರಾಜಿಗೆ ಸಂಬಂಧಿಸಿದ authorization ದಾಖಲೆಗಳನ್ನು (originals) ಲಗತ್ತಿಸಬೇಕು.
8. ಭದ್ರತಾ ಠೇವಣಿ ಹಣವನ್ನು ಕ್ರಾಸ್ಡ್ ಡಿಮ್ಯಾಂಡ್ ಡ್ರಾಫ್ಟ್ ಮೂಲಕ ತೋಟಗಾರಿಕೆ ನಿರ್ದೇಶಕರು, ಲಾಲ್‌ಬಾಗ್, ಬೆಂಗಳೂರು ರವರ ಹೆಸರಿನಲ್ಲಿ ಪಡೆಯಬೇಕು. Dessicated Coconut unit ಹಾಗೂ Coconut Milk Unitಗಳಿಗೆ ಪ್ರತ್ಯೇಕ ಭದ್ರತಾ ಠೇವಣಿ ಹಣ ಕ್ರಾಸ್ಡ್ ಡಿಮ್ಯಾಂಡ್ ಡ್ರಾಫ್ಟ್‌ಗಳನ್ನು ನೀಡಬೇಕು.

